# ಉಪಕಾರ ಸ್ಮರಣೆ

ಕುಷ್ಟಗಿಯಲ್ಲಿ ಶ್ರೀ. ಜಿ. ಗೋವಿಂದರಾವ ವಕೀಲ, ಶ್ರೀ. ವಿ. ಭೀಮಾಚಾರ್ಯ ಚಳಗೇರಿ ವಕೀಲ, ಇವರು ೧೫ ಜನ ಚಂದಾದಾರನ್ನೂ ಚಿತ್ತಾಪುರ ತಾ. ಲಿಂಗಸೂಗೂರನಲ್ಲಿ ಇಟಗಿ ವಿ. ರಾಘವೇಂದ್ರಾಚಾರ್ಯರು ೫ ಜನ ಚಂದಾದಾರರನ್ನೂ, ಕೂಡ್ಸಿಕೊಟ್ಟವರಲ್ಲಿ ಅಭಿನಂದನೆಗಳು. ಈ ೪ ನೇ ಕುಸುಮ ಅಚ್ಚಾಗಲು, ಗಂಗಾವತಿಯಲ್ಲಿ ಶ್ರೀ. ವೆ. ಭೋಗೇಶಾಚಾರ್ಯ ವಕೀಲ ಮತ್ತು ಇವರ ಸೂಚನೆಯಂತೆ ಶ್ರೀ. ವೆ. ಅಯೋಧ್ಯಾ ರಾಘವೇಂದ್ರಾಚಾರ್ಯರು ೧೫–೧೬ ಜನ ಚಂದಾದಾರನ್ನು ಕೂಡಿಸಿ ಕೊಟ್ಟಿರುವರು. ಶ್ರೀ. ಕಿಶನರಾವ ವಕೀಲ ಕೊಪ್ಪಳ ಪುನಃ ೫ ಜನರನ್ನು ಬೆಳಗಾಂವಿಯಲ್ಲಿ ಶ್ರೀಮಾನ್, ಬಳವಂತರಾವ ದಾತಾರ ವಕೀಲ ಶ್ರೀ. ಬಳವಂತರಾವ ಪೋತದಾರ, ರಿ|| ಜಜ್ಜ ಇವರು, ಇವರ ಸೂಚನೆಯಂತೆ ಶ್ರೀವೇಣಿ ಮಾಧವಾಚಾರ್ಯ ದೇವಳಿ ಇವರು ಬಹು ಆದರದಿಂದ ೧೫ ಜನ ಚಂದಾದಾರನ್ನು ಕೂಡಿಸಿ ಕೊಡುವದಲ್ಲದೆ ಸುಳಾದಿಗಳ ಪುಸ್ತಕಗಳನ್ನು ಸಹ ಪ್ರಚಾರ ಮಾಡುವಲ್ಲಿ ಸಹಾಯ ವಿತ್ತವರ ಉಪಕಾರ ಸ್ಮರಿಸುತ್ತದೆ.

ಗದಗಿನಲ್ಲಿ ಶ್ರೀ. ಬಳ್ಳಾರಿ ವೆಂಕೋಬರಾಯರು ಹೆಡ್ ಕ್ಲಾರ್ಕ ಎನ್. ಸಿ. ಮಿಲ್ ಗದಗ ಇವರು ಮತ್ತು ಇವರ ಸೂಚನೆಯಂತೆ ಶ್ರೀ. ಗೋವಿಂದರಾವ ಮಾಸ್ತರ ನವಲಗುಂದ ಇವರು ೧೬ ಜನ ಚಂದಾದಾರನ್ನು ಕೂಡಿಸಿ ಕೊಟ್ಟಿರುವರಲ್ಲದೆ ಇನ್ನೂ ಪ್ರಯತ್ನ ನಡೆಸಿರುವರಲ್ಲಿ ವಂದನೆಗಳನ್ನರ್ಪಿಸುತ್ತದೆ.

ಈ ಶ್ರಾವಣಕ್ಕೆ ೧ ವರ್ಷವಾಯಿತು. ಅಚ್ಚಿನ ತೊಂದರೆ ದ್ರವ್ಯ ಅನಾನುಕೂಲತೆ ಚಂದಾದಾರರು ಸರಿಯಾಗಿ ಹಣ ಕಳಿಸದಿರುವಿಕೆ, ಇದರಿಂದ ತಡವಾಗಿದೆ. ಈ ೪ ನೇ ಕುಸುಮ ಬಹು ಶ್ರಮದಿಂದ ಹೊರಟಿವೆ. ಕಾರ್ತಿಕ ಶು. ೧೦ ವರೆಗೆ ೫-೬ ಕುಸುಮಗಳು ಅರಳುವವು. ಮುಂದಿನಿಂದ ಹೊಸ ವರುಷ. ಬಾಕಿ ಇದ್ದವರು ಚಂದಾ ರೂ. ತ್ವರಾ ಕಳುಹಲು ವಿನಂತಿ.

—ಪ್ರಕಾಶಕ

# ಅರಿಕೆ.

## ಶ್ರೀ ಹರಿದಾಸ ಸಾಹಿತ್ಯ ಮಾಲೆಯ ನಾಲ್ಕನೇ ಕುಸುಮ

## ಅಧ್ಯಾತ್ಮ ಮಾಲಾ

**ಶ್ರೀ ವಿಜಯದಾಸರ** ಶಿಷ್ಯರು **ಶ್ರೀ ವೇಣುಗೋಪಾಲ** ವಿಠ್ಠಲರು ಇವರ ಶಿಷ್ಯರು **ಶ್ರೀ ವ್ಯಾಸ ವಿಠ್ಠಲರು** ಕಲ್ಲೂರ ಸುಬ್ಬಣದಾಸರು ಇವರ ಶಿಷ್ಯರು ವೈರಾಗ್ಯಶಾಲಿ ತಮ್ಮಣದಾಸರೇ **ಶ್ರೀ ರಘುಪತಿ ವಿಠ್ಠಲರು.** ಅಪರೋಕ್ಷ ಜ್ಞಾನಿಗಳು ಅಧ್ಯಾತ್ಮ ಕೋವಿದರು ಇವರು ಶ್ರೀ ವಿಜಯ ದಾಸರ ಕಾಲದವರು. ಅನೇಕ ಪದ ಪದ್ಯ ಸುಳಾದಿಗಳನ್ನು ರಚಿಸಿರುವರು. ಇವರ ಭಾಷಾ ಶೈಲಿ ಶಬ್ದ ಲಾಲಿತ್ಯ ಪ್ರಮೇಯ ವಿವರಣೆ ಶ್ರೀ ವಿಜಯ ದಾಸಾರ್ಯರಂತೆ ಇರುವದು. ಇವರು ಪದ ಸುಳಾದಿಗಳನ್ನಲ್ಲದೇ ಗದ್ಯ ರೂಪವಾಗಿ ಅಧ್ಯಾತ್ಮಮಾಲಾ ಮತ್ತು ತೈತ್ತರೀಯ ಉಪನಿಷತ್ ವಿವರಣೆ ೨೦೦ ವರ್ಷದ ಪೂರ್ವದ ದೇಶಭಾಷೆಯಲ್ಲೇ ರಚಿಸಿರುವರು. ಆ ಭಾಷೆಯ ಶೈಲಿಯೂ ಹಾಗೆಯೇ ಕೊಡಲಾಗಿದೆ.

ಈ ಅಧ್ಯಾತ್ಮ ಮಾಲೆಯು ಶ್ರೀ ವಿಜಯದಾಸಾರ್ಯರ ೧೦೧ ಸುಳಾದಿಗಳ ಅರ್ಥವಿದೆ ಎಂದು ಆರ್ಯರು ಹೇಳುವ ವಚನ ಸತ್ಯ. ಅಲ್ಲಲ್ಲೇ ಇವರು ಶ್ರೀ ವಿಜಯರಾಯರ ಸುಳಾದಿಗಳ ಶಬ್ದಗಳನ್ನೇ ಉಪಯೋಗಿಸಿರುವರು. ಈ ಉತ್ತಮ ಗ್ರಂಥವು ಕೇವಲ **ಉಪಾಸನಭಾಗ ಸುಳಾದಿಗಳ** ಅರ್ಥ ಪೂರಿತವಾಗಿದೆ. ಶ್ರೀ ಐಜಿಸ್ವಾಮಿಗಳವರು ರಚಿಸಿದ ಉಪನಿಷತ್‌ಯುಕ್ತ ಮಾನಸಸ್ಮೃತಿಯಂತೆ ಇರುವದು. ಮುಖ್ಯ **ಉಪಾಸನೆಗೆ** ಕಾರಣವಾದ ಸ್ಥೂಲ ದೇಹಾರಂಭಿಸಿ ಜೀವನ ಸ್ವರೂಪ ದೇಹಗಳಲ್ಲಿರುವ ಹರಿರೂಪಗಳ ವಿಚಾರ (೫೬) ಪುಟದವರೆಗೆ ಸವಿಸ್ತರ ಹೇಳಿದ್ದಾರೆ.

ಮುಂದೆ "ಧಾರಣಧ್ಯಾನಯೋಗ" ವೆಂಬ ಸುಳಾದಿಗಳ ಅರ್ಥವನ್ನೆ ವಿಶದೀಕರಿಸಿದ್ದಾರೆ. ದೇಹದಲ್ಲಿರುವ ಬ್ರಹ್ಮಾದಿ ಸಕಲ ದೇವತೆಗಳ ಉತ್ಪತ್ತಿ ತತ್ಸಾಧನ ಮನಸ್ಸು ಪರಿಶುದ್ಧವಾಗಲು ಆಯಾ ದೇವತೆಗಳ ಉಪಾಸನೆ ಕ್ರಮ ಅವರ ಅನುಗ್ರಹ ಸಂಪಾದನೆ ಮುಖ್ಯವೆಂದು ಹೇಳಿ, ಮುಂದೆ ಕರ್ಮ ಕಾಲ ದೇಶ ಪ್ರಕೃತಿಗುಣದಿಂದ ಸೃಷ್ಟಿಕ್ರಮ ಉಪ ಸಂಹಾರ ಗೈಯುತ್ತ ಅವಸ್ಥಾತ್ರಯ ಪ್ರೇರಕನಾದ ಶ್ರೀ ಹರಿಯ ರೂಪ ಚಿಂತನೆ ಪೂರ್ವಕ ಉಪಾಸನಾ ವಿಧಿಯನ್ನು ಸವಿಸ್ತರವಾಗಿ ಹೇಳಿದ್ದಾರೆ. ಇದು ಕೇವಲ ಮೋಕ್ಷ ಮಾರ್ಗಕ್ಕೆ ಮುಖ್ಯ ಸಾಧನ.

ಉಪಾಸನಾಭಾಗ ಸುಳಾದಿಗಳು ಬೇಕೆಂಬ ಆತುರವುಳ್ಳವರು ಈ ಉತ್ತಮ ಗ್ರಂಥವನ್ನು ಚನ್ನಾಗಿ ವಿಮರ್ಶಿಸಿ ಸದ್ಗುರುಗಳಿಂದ ಉಪಾ ಸನಾ ವಿಧಿಯನ್ನು ತಿಳಿದು ಸಾಧನ ಮಾಡುವದು. ಗುರುಗಳ ಅನುಗ್ರಹ ವಿಲ್ಲದೇ ಯಾವದೂ ಆಗದು. ಸುಮ್ಮನೇ ಕಣ್ಣುಮುಚ್ಚಿ ಕುಳಿತರೆ ಬಕ ಧ್ಯಾನವೆ ಹೊರ್ತಾಗಿ ಶ್ರೀಹರಿ ಒಲಿಯನು.

ಅಚ್ಚಿನ ಅನೇಕ ತೊಂದರೆಗಳಿಂದ ಅರ್ಧ ಗ್ರಂಥವನ್ನು ಈ ನಾಲ್ಕನೆ ಕುಸುಮದಲ್ಲಿ ಪ್ರಕಟಿಸಿದೆ. ಮುಂದೆ ೫ ನೇ ಕುಸುಮದಲ್ಲಿ ಸಂಪೂರ್ಣ ಗ್ರಂಥ ಪ್ರಕಟಿಸುತ್ತದೆ. ವಿಷಯಾನುಕ್ರಮಣಿಕೆ ಮತ್ತು ಗ್ರಂಥದ ಮುಖ್ಯ ಸಾರ, ಉಪಾಸನೆಯ ಭಾವವನ್ನುಸಹ ೫ ನೇ ಕುಸುಮದಲ್ಲಿ ವಿವರಿಸಲಾಗು ತ್ತದೆ. ಈ ೪ ನೇ ಕುಸುಮ ಪ್ರಕಟನಿಗೆ ಮುಂಗಡ ಚಂದಾ ಕೊಟ್ಟವರದೂ ಅರ್ಧ ಪಾಲು ಸಹಾಯದೊರಕಿದೆ. ಅವರ ಉಪಕಾರ ಸ್ಮರಿಸುತ್ತದೆ.

—ಪ್ರಕಾಶಕ



|| ಹರಿಃ ಓಂ ||

|| ಶ್ರೀ ಲಕ್ಷ್ಮೀ ನರಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ: ||

|| ಶ್ರೀ ಗುರುರಾಜೋ ವಿಜಯತೇ ||



ಅಜ್ಞಾನ ತಿಮಿರಚ್ಛೇದಂ ಬುದ್ಧಿ ಸಂಪತ್ಪ್ರದಾಯಕಂ ||
ವಿಜ್ಞಾನ ವಿಮಲಂ ಶಾಂತಂ ವಿಜಯಾಖ್ಯ ಗುರುಂಭಜೇ ||

---

ಅಪರೋಕ್ಷ ಜ್ಞಾನಿಗಳಾದ

## ಶ್ರೀ ರಘುಪತಿ ವಿಠ್ಠಲ ವಿರಚಿತ

# ಅಧ್ಯಾತ್ಮಮಾಲಾ

ಶ್ರೀ ಮಧ್ವಾಂತರ್ಗತ ವೇದವ್ಯಾಸಾಯ ನಮಃ
ಶ್ರೀ ರಾಘವೇಂದ್ರಗುರು ಶ್ರೀ ವರದೇಂದ್ರಗುರು

**( ಅಧ್ಯಾತ್ಮ ) ತತ್ವಮಾಲಾ ಬರೆವದಕ್ಕೆ ಶುಭಮಸ್ತು**

ಯಥಾಯೋಗ್ಯತಾನುಸಾರ ಗುರುಗಳು ಪೂರ್ಣ ಅನುಗ್ರಹ ಮಾಡೋಣದರಿಂದ ಶ್ರೀ ಪರಮಾತ್ಮ ಪ್ರೀತನಾಗಿ ತನಗೆ ಪರಿವಾ

ರಾವಂಥ ರಮಾ ಬ್ರಹ್ಮಾದಿ ಸಮಗ್ರ ತತ್ವಾಭಿಮಾನಿಗಳಿಂದ ಯುಕ್ತನಾಗಿ ದಾವ ಆಧ್ಯಾತ್ಮ ಬರಸುಥಾನೋ; ಅವು ಬರಿಯದಿರಲಿಕ್ಕೆ ಜೀವ ಅಸ್ವತಂತ್ರಚೇತನ ತಥಾ ಪರಾಧೀನಕರ್ತುನಾದ ಪ್ರಯುಕ್ತ, ಮಾಡಿಸಿದ್ದು ಮಾಡದೇ ಇರಲಿಕ್ಕೆ ಅಶಕ್ತನಾದ ಪ್ರಯುಕ್ತ, ಯೋಗ್ಯತಾನುಸಾರ ಕಾಲಾನುಸಾರ ದಾವ ಪ್ರಮೇಯ ಬರೆಸಿದ್ದು ಬರೆಯಲ್ಪಡುತ್ತದೆ. ಅದು ಯುಕ್ತವೋ ಅಯುಕ್ತವೋ ವಿಚಾರಿಸಲಿಕ್ಕೆ ನಮ್ಮಗೆ ಬುದ್ಧಿ ಇಲ್ಲ. ಪರಮಾತ್ಮ ತತ್ವಾಭಿಮಾನಿಗಳು ಕ್ರಮದಿಂದ ಮಹಾ ಪ್ರಾಜ್ಞರಾದ ಕಾಲಕ್ಕೂ ಅವರವರ ಯೋಗ್ಯತಾ ನೋಡಿ ಜೀವನ ಗುಣಕರ್ಮಾನುಸಾರ ಸಕಲ ಕ್ರಿಯಾ ಮಾಡಸುಥಾರೆ. ಆದರೂ ಪರಮಾತ್ಮ ದೋಷದೂರನಾದಕಾರಣ, ವೈಷಮ್ಯ ನೈರ್ಘೃಣ್ಯ ಒಡಂಬಡಬಾರದು. ಆ ಪ್ರಯುಕ್ತ ಯೋಗ್ಯತಾ ಅನುಸರಿಸುತಿದ್ದ ಕಾರಣ, ದೈತ್ಯರಿಗೂ ಮುಖ್ಯವಾಗಿ ಪರಮಾತ್ಮನಿಯಾಮಕನಾದದುಕೆ, ಜ್ಞಾನಿಗಳು ಯೋಗ್ಯತೆಯಲ್ಲಿ ಪರಿಯಾವಸಾನ ಮಾಡಥಾರೆ. ಯೋಗ್ಯತೆಗೆ ಮಹಾ ಮಹತ್ಮಿ ಏನೆಂದರೆ, ಪರಮಾತ್ಮ ನೋಡಪೆ ಹೋದರೆ ಯೋಗ್ಯ ಜೀವರುಗಳು ಜಡಕ್ಕೂ ಹೀನತತ್ಪ್ರಯುಕ್ತಾ ದೈತ್ಯರಿಗೂ ಪರಮಾತ್ಮನೇ ಮುಖ್ಯ ನಿಯಾಮಕನೆಂದು ಒಡಂಬಡಬೇಕು. ಆದರೂ ಪರಮಾತ್ಮಗೆ ಇದು ಮಹಾ ಗುಣವಾಗಿ, ಕರೆಸುತ್ತದೆ. ಜೀವನೇವೆ ಮಹಾ ದೋಷಿ ಎಂದು ಸರ್ವ ಸಜ್ಜನರು ಒಡಂಬಡಥಾರೆ.

ಹಾಂಗೆ ಜೀವಕೋಟಿಪ್ರೊಳಗೆ ನಾನು ಒಬ್ಬ ತೃಣಪ್ರಾಯನು, ಶ್ರೀ ಪರಮಾತ್ಮನ ಆಧೀನದವ, ಆವ ಹೇಗೆ ಪ್ರೇರಿಸಿಥಾಗೆ ಬರೋಣವಾಗತದೆ. ಇದಿಷ್ಟೂ ಸಜ್ಜನರಿಗೆ ಸಮ್ಮತವಾಗಿದ್ದರೆ ಪರಮಾತ್ಮನ ದಯವೇ ಸ್ಮರಿಸತಕ್ಕದ್ದು. ಅಸಮ್ಮತವಾದ ಪಕ್ಷದಲ್ಲಿ ನನ್ನನ್ನೇವೆ ಮಂದಮತಿಯೆಂದು ನಿಂದಿಸತಕ್ಕದ್ದು. ಪ್ರೇರಕರನ್ನ ನಿಂದಿಸಬೇಕಾದರೆ ಅವರು ಮಹಾ ಪ್ರಾಜ್ಞರು ಎಂದು ಸರ್ವರಿಗೂ ಸಮ್ಮತ. ನನ್ನ ಯೋಗ್ಯಕಾಲ ಅವಲಂಬಿಸಿ ಅವರು ಪ್ರೇರಿಸಿದ ಪ್ರಯುಕ್ತ ನನ್ನನ್ನೇ ಅತಿ ನಿಂದಿಸತಕ್ಕದ್ದು. ಬರಿಸಿಥಾಗೆ ಬರೋ ( ಬರಿಯುವ ) ಪ್ರಕಾರ.

# ರಮಾ ಅಭಿಮಾನ್ಯವಾದ ವಸ್ತು ಪ್ರಕರಣ

ಪೂರ್ವದಲ್ಲಿ ರಮಾದೇವೇರಿಂದ ಅಭಿಮಾನ ಮಾಡಿಸಿಕೊಳ್ಳಲ್ಪಟ್ಟಂಥ ವಸ್ತುಗಳ ವಿಸ್ತಾರಮಾಡಲ್ಪಡತದೆ. ನಿತ್ಯಾಭಿಮಾನಿಗಳು ಅನಿತ್ಯಾಭಿಮಾನಿಗಳು ಎರಡು ವಿಧ. ಇದರೊಳಗೆ ನಿತ್ಯಾಭಿಮಾನಿ ಮುಕ್ತವಾದ ಪ್ರಯುಕ್ತ ಸಕಲ ಬಂಧವು ಈಕಿಯಿಂದಾದ ಪ್ರಯುಕ್ತ ಇದನ್ನು ತಿಳಿಯಬೇಕು. ಅದು ಏನುಕಾರಣ ಎಂದರೆ, ಫಲ ಬೇಕಾದವರಿಗೆ ವೃಕ್ಷಕ್ಕೆ ಹೋಗದೆ ಫಲ ದೊರಿಯದೊ? ಹಾಂಗೆ ಪರಮಾತ್ಮಗೆ ಪ್ರತಿಬಿಂಬರಾದಂಥ ಜೀವರಾಶಿಗಳು, ಮೂಲ ಪ್ರಕೃತಿ ಕಾಲ ಕರ್ಮ ಈ ನಾಲ್ಕು ವಿಧವಾದಂಥಾ ಸೃಷ್ಟಿಗೆ ರಮಾ ದೇವರ ಸಂಪತ್ತಿಗೆ ಕಾರಣವಾದಂಥಾವು. ಇವು ವಿಚಾರಿಸಿದರೆ ತನ್ನಿಯಾಮಕ ನಾರಾಯಣ ಅನಂತ ಗುಣ ಪೂರ್ಣನೆಂದು ಭಕ್ತಿ ಮಾಡಲಿಕ್ಕೆ ಬಂದೀತೆಂದು ಪರಮಾತ್ಮಗೆ ಪ್ರತಿಮಾಭೂತರಾದಂಥ, ಜೀವ ಪ್ರಕೃತಿ ಕಾಲ ಕರ್ಮ ಇವಕ್ಕೆ ಆಧಾರವಾದಂಥ ಅವ್ಯಾಕೃತ ಆಕಾಶ ಏತತ್ ಸ್ವರೂಪ ತಿಳಿಸಿಕೊಡುವಂಥ ಅನಂತಾನಂತ ವೇದಗಳು ಇದರ ವಿವೇಕ ತಿಳಿಯಬೇಕೆಂದು ಮನಸ್ಸು ಇಚ್ಛೈಸುತ್ತದೆ. ಮುಂದೆ ತಿಳಿಸೋಣ ಹರಿ ಗುರುಗಳ ಆಧೀನ.

ಜೀವಿಸುವವರು ತಮ್ಮ ಸುಖಾರ್ಥವಾಗಿ ಮುಖ್ಯ ಮಾಡತಕ್ಕ ಪ್ರಯೋಜನದಾವದು ಎಂದರೆ, ಪರಮಾತ್ಮನ ವಿಷಯಕ್ಕೆ ಜ್ಞಾನ ಸಂಪಾದಿಸೋಣ. ಅದು ಯಾಕೆಂದರೆ ಪ್ರಭುವಿನ ಪ್ರಸಾದ ಲೋಕರಿಗೆ ಸುಖಕ್ಕೆ ಕಾರಣ. "ಅಪ್ರಸಾದ, ಕ್ಲೇಶಕ್ಕೆ ಕಾರಣ" ಅದು ಹೋಗಬೇಕಾದರೆ, ಹೀಂಗಿದ್ದ ಕಾರಣ ಅಗತ್ಯವಾಗಿ ಸುಖಾಪೇಕ್ಷೆಸೋಣ, ಜೀವರ ಸ್ವಭಾವ. ಇದರೊಳಗೆ ಶಾಶ್ವತ ಸುಖ ನಶ್ವರ ಸುಖ ಎರಡು ವಿಧ. ನಶ್ವರಸುಖ ಕಾಮುಬಿಡಬೇಕು. ಮೋಕ್ಷ ಶಾಶ್ವಿತ ಮುಖ್ಯ ಸುಖ ದಾವದೊ ಅದು ಇಚ್ಛಾ ಮಾಡಭೇಕು. ಅದು ದಾವದಂದರೆ, ಅನಂತಾನಂತ ಗುಣ ಪರಿಪೂರ್ಣ ಸಮಾಧಿಕರಹಿತ ಪರಮ ಸ್ವತಂತ್ರ, ಮುಕ್ತರ ಕಾಮುಧೇನು ಸ್ಮೃತಿಮಾತ್ರದಿಂದ ಭಕ್ತರ ಮಹಾ ವಿಪತ್ತು ಪರಿಹರಿಸುವಂಥಾ, ಅತಿ ದಯಾ ಸಮುದ್ರನಾದ ಶ್ರೀ ನಾರಾಯಣನಲ್ಲಿ ಅಸದೃಶವಾದ ಅತ್ಯಧಿಕ

ವಾದ ದೃಢತರವಾದ ಭಕ್ತಿ ಮಾಡಿ, ಅನ್ಯತ್ರ ಕಿಂಚಿತ್ ಕಾಮುಕನಾಗದೆ ಇರೋಣವೇ ಮುಖ್ಯ ಪ್ರಯೋಜನವೆಂದು, ಮಹಾ ಜ್ಞಾನಿಗಳು ಇದು ತಮಗೆ ಸಮ್ಮತವೆಂದು ಶಿರದೂಗಿ, ಅತಿ ಹರುಷದಿಂದ ಅತಿ ಪ್ರೇಮಾಸ್ಪದದಿಂದ, ಬರಿಯಲಿಕ್ಕೆ ಪೂರ್ಣ ಅನುಗ್ರಹ ಉಳ್ಳವರಾದ ಪ್ರಯುಕ್ತ ಈ ಮಾತು ಉಪದೇಶಮಾಡಿ ತಮ್ಮ ಮೊರೆ ಹೊಕ್ಕಂಥಾ ದೀನ ಜನರ ಸಂಸಾರ ಪಾಶದಿಂದ ಮುಕ್ತರ ಮಾಡಿ, ಶ್ರೀ ಪರಮಾತ್ಮನಿಂದ ಸ್ವರೂಪಾನಂದಾವಿರ್ಭಾವ ಮಾಡಿಸಿಕೊಡಥಾರೆಂದು ಜ್ಞಾನಿಗಳು ದಯಮಾಡಿ ಹೇಳುವಂಥಾದು ಹೇಳಲ್ಪಡತದೆ.

## ಪರಮಾತ್ಮಗೆ ಅಷ್ಟೈಶ್ವರ್ಯ ಪ್ರಕರಣ

ಪರಮಾತ್ಮ ಸಮಾಧಿಕ ರಹಿತನೆಂದು ಹ್ಯಾಗೆ ತಿಳಿಯಬೇಕೆಂದರೆ ಪರಮಾತ್ಮಗೆ ಸರಿ ಅಣು ದಾರೂ ಇಲ್ಲ. ಮಹತ್ತು ದಾರೂ ಇಲ್ಲ. ಸ್ಥೂಲ ದಾರೂ ಇಲ್ಲ. ಲಘು ದಾರೂ ಇಲ್ಲ. ಪ್ರಾಪ್ತಿ ಪ್ರಾಕಾಮ್ಯ ಈಶತ್ವ ವಶಿತ್ವ ಈ ನಾಲ್ಕಕ್ಕೂ ದಾರು ಸರಿ ಇಲ್ಲ.

ಪ್ರಮಾಣ— ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ||
ಪ್ರಾಪ್ತಿಃ ಪ್ರಾಕಾಮ್ಯಂ ಈಶತ್ವಂ ವಶಿತ್ವಂ ಚಾಷ್ಟ ಸಿದ್ಧಯಃ ||

"ಪ್ರಾಪ್ತಿ" ಎಂದರೆ ಸಮಗ್ರ ಪುರುಷಾರ್ಥ ಪೂರ್ಣವಾಗಿಹೋಣ "ಪ್ರಾಕಾಮ್ಯ" ವೆಂದರೆ ಸಕಲ ಜಗತ್ತಿಗೆ ತಾನೇ ಬೇಕೆಂದು ಬಯಸಿಕೊಂಬೋಹಾಂಗೆ ಇರೋಣ. "ಈಶತ್ವ" ಎಂದರೆ ನಿಯಾಮಕನಾಗಿ ಹೋಣ. "ವಶಿತ್ವ" ಎಂದರೆ ಸಕಲ ಜಗತ್ತನ್ನ ವಶಪಡಿಸಿಟ್ಟುಕೊಂಡಿಹೋಣ. "ಕಾಮ್ಯ" ಎಂದರೆ ಈ ಅಷ್ಟೈಶ್ವರ್ಯ ಮಧ್ಯದಲ್ಲಿ ಈತನ ಸರಿ ದಾರೂ ಇಲ್ಲ ಎಂದು ತಿಳಿಯಬೇಕಾದರೆ ಅನ್ಯ ವಸ್ತುಗಳು ಏತದೈಶ್ವರ್ಯವುಳ್ಳವರು ದಾರಾದರೂ ಇದ್ದರೆ ತತೋಽಪ್ಯಧಿಕ ಪರಮಾತ್ಮನು ಐಶ್ವರ್ಯವುಳ್ಳಾತನಾದ ಕಾರಣಾ ಸಮಗ್ರ ಭಕ್ತಿ ಪರಮಾತ್ಮನಲ್ಲಿ ಮಾಡತಕ್ಕದ್ದು.

ಏತದೈಶ್ವರ್ಯವುಳ್ಳಂಥಾ ಪರ ಹೇಳಿ ತನ್ನಿಯಾಮಕ ಪರಮಾತ್ಮನ ಮಹತ್ಮೆ ಅತಿ ಗಹನವೆಂದು ಹೇಳಲ್ಪಡುತ್ತದೆ.

# ಜೀವರ ಪ್ರಕರಣ

ಅಣುವಾದ ಪದಾರ್ಥ ವಿಸ್ತಾರ ಮೊದಲು. ಅಣು ಜೀವ ಜೀವನ ಪರಿಮಿತಿ ಎಷ್ಟು ಎಂದರೆ, ಅಶ್ವ ಬಾಲಾಗ್ರದೊಳಗೆ ಸಹಸ್ರ ಭಾಗದೊಳಗೆ ಒಂದನೇ ಭಾಗದ ಪರಿಮಿತಿವುಳ್ಳದ. ಇದಗೆ ಇದೇ ಜೀವನೇದೇ ಶರೀರ ವಾಗಿ, ಅವಯವಗಳಿಂದ ಯುಕ್ತವಾಗಿದ್ದಂಥಾದ ಮತ್ತು ಅವಯವಗಳಿಂದ ಸಹಿತನಾಗಿ, ಅನಂತಭಾಗ ಪರಮಾತ್ಮನ ಸಾಮರ್ಥ್ಯಯಿಂದ ಆಗುವಂಥಾ ಇಂಥಾ ಜೀವರ ಸಮೂಹ, ಅದರೊಳಗೆ ಕೆಲವರು ಸಿರಂಶರಾಗಿ ಇದ್ದಾರೆ. ಈ ಜೀವ ರಾಶಿಗಳ ಒಂದೊಂದು ಸಮು ಗಣವೇ ಅನಂತಾನಂತ. ಬ್ರಹ್ಮ ದೇವರಿಂದಲೂ ಕೂಡಾ ಈ ಜೀವರಾಶಿಗಳನ್ನು ಎಣಿಸಲಿಕ್ಕೆ ಶಕ್ಯವಲ್ಲ. ಬ್ರಹ್ಮದೇವರು ಸರ್ವಜ್ಞರಾಗಿದ್ದಾರೆ ಎಂಬ ಶಂಕಾ ಬಂದರೆ ಇದರು ದೇವರ ಸೃಷ್ಟಿಗೆ ಕಾರಣರಾದ ಪ್ರಯುಕ್ತ ದೇವರ ಸೃಷ್ಟಿಗೆ ಆದ್ಯಂತಗಳು ಇಲ್ಲದ ಕಾರಣ, ಎಂದೆಂದಿಗೂ ಸಲಿಂಗ ಜೀವರಾಶಿಗಳ ರಾಶಿ ಮುಗಿಯು ದಲೆ ಇದ್ದಕಾರಣ ಹೀಗೆ ಒಡಂಬಡಬೇಕು.

ಹಾಗಾದರೆ ಬ್ರಹ್ಮ ದೇವರಿಗೆ ಅಸರ್ವಜ್ಞತಿ ಬಂತಲ್ಲ ಎಂದರೆ ಅವರಿಗೆ ದೇವರ ಸಂಕಲ್ಪಾನುಸಾರ ನಡೋಣಾ ದೇವರಿಗೆ ಅತಿ ಮಹತ್ಮಿ ಒಡಂಬಡೋಣವೇ ಮಹಾ ಸರ್ವಜ್ಞತಿ. ತತ್ಕಾರಣ ಅವರು ಸರ್ವಜ್ಞರೇ ಸರಿ. ಹೀಗೆ ಲೋಕದಲ್ಲಿ ದೃಷ್ಟಾಂತವದೆ. ಅಜ್ಞಾನಿಗಳಿಗೆ ಸ್ನಾನಾದಿ ಸತ್ಕರ್ಮ ಎಂಬದು ಮಹಾ ಪುರುಷಾರ್ಥ. ಇಂಥಾ ಪುರುಷಾರ್ಥವೆಲ್ಲ ಅಪರೋಕ್ಷ ಸಮೀಪಸ್ಥರು ಅವಧೂತ ವೇಷ ಧರಿಸಿ ಇದನ್ನು ತುಚ್ಛೀ ಕರಿಸತಕ್ಕದ್ದು ಕಂಡದೆ. ಅವರಿಗೆ ಇದರ ಪಾಪವಿಲ್ಲ. ಇನ್ನು ಬ್ರಹ್ಮ ದೇವರಿಗೆ ಏನು ಹೇಳಬೇಕು. ಸಕಲ ಪದಾರ್ಥ ಜ್ಞಾನವುಳ್ಳವರಾಗಿ ಸರ್ವಜ್ಞನಾದ ಪರಮಾತ್ಮನ್ನ ಮರೆತರೆ ಅವನೇ ಅಸರ್ವಜ್ಞನೆಂದು ಶಾಸ್ತ್ರ ಸಿದ್ಧ ಪದಾರ್ಥ. ಬ್ರಹ್ಮನ್ನ ತಿಳೋದರಿಂದ ಬ್ರಹ್ಮನ್ನ ತಿಳಿದ ಅಜ್ಞಾನ ವಿಲ್ಲ. ತನ್ನ ಯೋಗ್ಯತೆಮೀರಿ ಪರಮಾತ್ಮನ ಸಂಕಲ್ಪ ಮೀರಿ ತಿಳಿಯಲಿಕ್ಕೆ ಹೋದರೆ ಅದೇ ಪರಮಾತ್ಮನ ವಿಸ್ಮೃತಿ. ಆಗತದೆಂಬುವದು ಸರ್ವಜ್ಞ ನಾದ ಬ್ರಹ್ಮ ಬಲ್ಲ. ತತ್ಕಾರಣ ಬ್ರಹ್ಮ ಸರ್ವಜ್ಞನೇ ಸರಿ. ಸರ್ವದಾ ಹರಿಗೆ ಪ್ರೀತ್ಯಾಸ್ಪದ. ಈ ಜೀವರಿಗೆ ಅಭಿಮಾನಿಗಳು ರಮಾ ದೇವಿಯರು

ಸಾತ್ವಿಕ ಜೀವರಿಗೆ ಶ್ರೀ ರೂಪದಿಂದ, ರಾಜಸ ಜೀವರಿಗೆ ಭೂರೂಪದಿಂದ ತಾಮಸ ಜೀವರಿಗೆ ದುರ್ಗಾ ರೂಪದಿಂದ, ಈ ಜೀವರಾಶಿಗಳು ಅನಂತ ಆದ್ಯಂತಗಳು ಎಂಬಲ್ಲಿ ಪ್ರಮಾಣ "ಅಜ್ಞಾನಂ ಚತುರ್ವಾರಂ ದ್ವಿವಾರಂ ಭಯ ವೇಧಾಚ" ಎಂಬದಕೆ ಬ್ರಹ್ಮದೇವರಿಗೆ ನಾಲ್ಕುವ್ಯಾಳ್ಯ ಅಜ್ಞಾನ ಎರಡುವ್ಯಾಳ್ಯ ಭಯ ಮುಕ್ತಿ ಆದಮೇಲೆ ಕೂಡಾ ಇರುತದೆ. ಹೀಗ್ಯಾ- ಕೆಂದರೆ ಸೃಷ್ಟಿಕಾಲದಲ್ಲಿ ಮಾತ್ರ ಒಡಂಬಡತಕ್ಕದ್ದು ಎಂದರೆ ಜೀವ ನಿತ್ಯ ನಾದಕಾರಣ ಮುಕ್ತಿಯಲ್ಲಿ ಕೂಡಾ ಒಡಂಬಡಬೇಕು. ಅದು ಹ್ಯಾಗಂದರೆ

ವೇದ ನಿತ್ಯವಾದ ಕಾರಣ ಮುಕ್ತಿಯಲ್ಲಿ ಒಡಂಬಡಬೇಕು. ಅದು ಹ್ಯಾಗಂದರೆ ರಮಾ ದೇವೇರಿಂದ ಅಭಿಮನ್ಯಮಾನವಾದ ಚೇತನ ಸಹಾ ಎಣಿಸಲಾರನು. ಅದು ದಾವದೆಂದರೆ (೧) ಅವ್ಯಾಕೃತಾಕಾಶ (೨) ಕಾಲಪ್ರವಾಹ (೩) ಪ್ರಕೃತಿ ಪರಮಾಣು (೪) ಜೀವರ ಸಮೂಹ ಅದರ ಆದ್ಯಂತ ಪರಿಮಿತಿ ತೋರದು. ಹಾಗೆ ರಮಾ ದೇವೇರ ಜ್ಞಾನಾನಂದ ...ರತ್ಮೆ ಸಾಕಲ್ಯ ತೋರದು. ಅತಿ ಪ್ರೇಮಾಸ್ಪದನಾದ ಶ್ರೀ ಹರಿಯ ...ಯು. ಇದು ವಂದು ಹೀಗೆ ಅಜ್ಞಾನ. ಇದರಲ್ಲಿ ಪ್ರಯತ್ನಮಾಡಿದರೆ ...ಾ ದೇವೇರ ಭಯ. ಎರಡು ಭಯ. ಅತಿ ಪ್ರೇಮಾಸ್ಪದನಲ್ಲಿ ಭಯ ...ಕೆ ತೋರಿತು ಎಂದರೆ, ಅತಿ ಸತ್ವನಾದ ಅರ್ಜುನಗೆ ಅತಿ ಕರುಣಾ ...ಪ ವಿಶ್ವರೂಪ ತೋರಿಸಬೇಕೆಂದು ಪ್ರಾರ್ಥನೆ ಮಾಡಿಸಿಕೊಂಡು ...ಲೇ ವಿಶ್ವರೂಪ ತೋರಿಸಿದರೆ ಯೋಗ್ಯತಾ ಸಾಲದಾದರಿಂದ ನೋಡ ...ರದೆ ನೆಲದಮ್ಯಾಲೆ ಪತಿತನಾಗಿ ಮೂರ್ಛಾವಸ್ಥಿ ಹೊಂದಿದ ತರುವಾಯ ...ಮಾತ್ಮನ ಅನುಗ್ರಹದಿಂದ ಎಚ್ಚತ್ತು ಅನೇಕ ಪ್ರಕಾರ ದೇವರನ್ನ ...ಂಡಾಡಿ ನಾನು ಬಹು ಅಪರಾಧಿಯೆಂದು ಕೊಂಡಾಡಿ ಬೇಡಿಕೊಂಡು ...ಃ ಶರಣಾಗತನಾದನು. ಆದ್ದರಿಂದ ಬ್ರಹ್ಮದೇವರು ಸರ್ವಜ್ಞರಾದ ...ರಣ ಯೋಗ್ಯತಾ ಮೀರಿ ಅಪೇಕ್ಷ ಮಾಡಮೇ ಭಯಸ್ಥರೋಪಾದೇಲಿ ...ಥಾರೆ. ಇದು ಅಲ್ಲದೇ ಮುಂದೆ ಋಜುಗಳು ಆಶಾ ಮಾಡ್ಯಾರೆಂದು ...ಕ್ಷಾಮಾಡದೇ ಇರುಥಾರೆ. ಆದಾಗ್ಯೂ ಋಜುಗಳು ಸ್ವಾಭಾವಿಕವಾಗಿ ...ನಿಗಳೆಂದು ಶಾಸ್ತ್ರದಲ್ಲಿ ಉಕ್ತವಾಗಿದ್ದ ಕಾರಣ ಇಂಥಾ ಅಧಿಕಾರ ...ರ್ಯಕ್ಕೆ ಋಜುಗಳು ಆಶೆ ಮಾಡರು. ನಿರ್ಭಯರು ಜ್ಞಾನಿಗಳೆಂದು

ಶಾಸ್ತ್ರದಲ್ಲಿ ಸಿದ್ಧ. ಹೀಗೆ ಒಡಂಬಡವೆ ಹೋದರೆ ರಮಾ ದೇವೇರಿಗೆ ತಾರತಮ್ಯ ಸಿದ್ಧಿಸದು. ಇನ್ನು ಜೀವರಾಶಿಗಳ ಅನಂತ್ಯತ್ವ ಕಾರಣ. ಹ್ಯಾಗೆ ಪರಮಾತ್ಮ ಸರ್ವ ಕರ್ತನಾದ ಕಾರಣಕ್ಕೆ ಸರ್ವ ಜೀವರಲ್ಲಿ ಅಂತಃಕರಣ ಇದ್ದಕಾಲಕ್ಕೆ ತಮೋಯೋಗ್ಯರಿಗೆ ಕ್ಲೇಶ ಬಡಿಸುವನು. ವೈಷಮ್ಯ ನೈರ್ಘಣ್ಯವಿಲ್ಲ. ಹ್ಯಾಗೆ ಬ್ರಹ್ಮಗೆ ಅಸರ್ವಜ್ಞತೆಯಿಲ್ಲಿ ತಪ ತಪವೆಂಬೋ ವ್ಯಾಖ್ಯೆಗೆ ಭಯವಾದದ್ದೇ ಹೊರ್ತು ಮುಕ್ತ್ಯಾನಂತರ ಒಡಂಬಡತಕ್ಕದ್ದಲ್ಲಾ ಎಂದರೆ ಅಜ್ಞಾನ ಭಯ ಕೊಂಚ, ಅದು ಲೋಕಕ್ಕೆ ಪ್ರದರ್ಶನಮಾತ್ರ. ಹೀಗೆ ತಾತ್ಪರ್ಯವಿದ್ದ ಪ್ರಯುಕ್ತ ಪೂರ್ವದಲ್ಲಿ ಹೇಳಿಅದೆ.

ಹೀಗೆ ಪರಮಾತ್ಮನ ಅಧಿಕಾರಕ್ಕೆ ಅಂಜತಾನೆಂದು ಒಡಂಬಡೋಣ ಉಚಿತ ಕಾಣತದೆ. ಮೋಕ್ಷದಲ್ಲಿ ತಾರತಮ್ಯ ಸಿದ್ಧವಾದ ಕಾರಣ ಈ ರಮಾದೇವೇರಿಂದ ಅಭಿಮಾನ ಮಾಡಿಸಿಕೊಳ್ಳಲ್ಪಟ್ಟಂಥಾ ಪರಮಾತ್ಮನ ಭಿನ್ನಾಂಶವಾದಂಥಾ

## ಜೀವರು ಮೂರು ಪ್ರಕಾರ ರಾಶಿ

ಇವರೊಳಗೆ ಅನಂತ ವಿಧ ತಾರತಮ್ಯ ಉಂಟಾಗಿ ಅದೆ. ಮೂರು ರಾಶಿ ಪರಮಾತ್ಮನ ಭಿನ್ನಾಂಶರಾದರೆ, ರಮಾ ದೇವೇರಿಗೆ ಮೂರು ರಾಶಿ ಮಕ್ಕಳಗಳಾದರು. ಒಬ್ಬ ಮಕ್ಕಳಿಗೆ ಮೋಕ್ಷ ಸುಖ, ಒಬ್ಬ ಮಕ್ಕಳಿಗೆ ಮಿಶ್ರಗತಿ, ಒಬ್ಬರಿಗೆ ಅತಿ ದುಃಖ. ಹಾಗೆಂದರೇ ಲೋಕನ್ಯಾಯದಿಂದ ನಿತ್ಯ ಮುಕ್ತಳಾದ ರಮಾ ದೇವೇರಿಗೆ ಪುತ್ರ ಕಷ್ಟ ನೋಡಿ ಸಹಿಸೋಣ ಹ್ಯಾಗಂದರೆ ಲೋಕರು ಅಜ್ಞಾನಿಗಳಾದ ಪ್ರಯುಕ್ತ ಕಷ್ಟವಾಗುತ್ತದೆ. ರಮಾ ಸುಖಪೂರ್ಣಳು ಅಭಿಮಾನ ಇಲ್ಲದ್ದು ಏನಂದರೆ, ದುಃಖಬಡೋದಿಲ್ಲ. ಲೋಕದಲ್ಲಿ ಅದು ಹ್ಯಾಗಂದರೆ, ಶರೀರದಿಂದ ಹುಟ್ಟಿದ ಪ್ರಯುಕ್ತ ಜೀವರೆಲ್ಲಾ ಅಭಿಮಾನ ಮಾಡಿ ಲೋಕರು ಸ್ನೇಹವ ಮಾಡಥಾರೆ ಹೊರ್ತಾಗಿ, ಪರಸ್ಪರ ಅತಿ ದೂರ ದೇಶಸ್ಥ ಬಂಧು ವರ್ಗಹೀನರಾದಂಥಾ ವರಲ್ಲಿ ಸ್ನೇಹ ಮಾಡೋದಿಲ್ಲವಲ್ಲಾ. ಇನ್ನು ಶರೀರದಿಂದ ಉತ್ಪನ್ನರಾದಂಥಾವರಲ್ಲಿ ಅಭಿಮಾನವಿಲ್ಲದೇ ಹೋದರ ಅವರಿಂದ ದುಃಖವಿಲ್ಲ. ಅದು

ಪಾವದು ಎಂದರೆ ಶರೀರದಿಂದ ಉತ್ಪನ್ನವಾದಂಥಾ ಮಲ ಮೂತ್ರ ನಖ ಕೇಶಾದಿಗಳು ಮಕ್ಕಳೀಸರಿ. ಲೋಕರು ಅದು ನಿವರ್ತಿ ಮಾಡಿಕೊಂಡು ಹ್ಯಾಗೆ ಸುಖ ಬಡುಥಾರೋ ಹಾಗೆ ರಮಾದೇವೇರಿಗೆ ಭಿನ್ನಾಂಶರಾದ ಪ್ರಯುಕ್ತ ಮೂರು ರಾಶಿಗಳು ಆಧೀನಸರಿ.

ಹ್ಯಾಗಂನರೆ ಮುತ್ತೈದೇರ ವಶದಲ್ಲಿದ್ದ ಮುತ್ತಿನೋಪಾದಿಯಲ್ಲಿ ಮುಕ್ತಿಯೋಗ್ಯರು, ಮಾಂಸ ಭಕ್ಷಕನ ಆಧೀನದಲ್ಲಿದ್ದ ಮೃಗದೋಪಾದೇಲಿ ತಮೋ ಯೋಗ್ಯರು ಭೂಮಿಯಲ್ಲಿದ್ದೆ ಮಣ್ಣಿನೋಪಾದೆಯಲ್ಲಿ ನಿತ್ಯ ಸಂಸಾರಿಗಳು. ಇದರೊಳಗೆ ಮುತ್ತೈದಿ ಮುತ್ತು ಬಹಳ ಜೋಕೆಮಾಡಿ ಸುಖ ಬಡೋಪಾದೆಯಲ್ಲಿ ರಮಾದೇವಿಯರು ಮುಕ್ತರಿಗೆ ಸುಖವನ್ನು ಕೊಟ್ಟು ಸುಖಬಡಸಥಾಳೆ. ತಮೋಯೋಗ್ಯರಿಗೆ ಮೃಗವಧೆಯೋಪಾದಿಯಲ್ಲಿ ತಮಸ್ಸಿನ ದುಃಖಕೊಟ್ಟು ಸುಖಬಡಸಥಾಳೆ. ನಿತ್ಯ ಸಂಸಾರಿಗಳಿಗೆ ಉದಾಶೀನದಿಂದ ಸುಖ ದುಃಖವನ್ನು ಕೊಟ್ಟು ಸುಖ ಬಡಸಥಾಳೆ. ಈ ಜೀವರಾಶಿಗಳ ಆದ್ಯಂತ ಸಾಕಲ್ಯವೂ ರಮಾದೇವೇರು ಬಲ್ಲರು. ತಾವೇ ಅಭಿಮಾನಿಗಳಾದ ಕಾರಣ ಬ್ರಹ್ಮಾದ್ಯನಂತ ಜಗತ್ತು ರಮಾದೇವೇರಿಗೆ ಏಕದೇಶವಾದ ಕಾರಣ ಬ್ರಹ್ಮದೇವರಕಿಂತಲೂ ಕೋಟಿಗುಣ ಅನಂತ ಕೋಟಿಗುಣದಿಂದ ಸರ್ವಜ್ಞಳೆಂದು ವೇದ ಪ್ರತಿಪಾದಿಸುತಿದ್ದಕಾರಣ ರಮಾ ದೇವೇರು ಜೀವರ ಆದ್ಯಂತಗಳು ಸರ್ವವೂ ಬಲ್ಲಳೆಂದು ಹೇಳಬೇಕು

ಹಾಗಾದರೆ ಪರಮಾತ್ಮ ಬಲ್ಲನೆಂಬದಕ್ಕೆ ರಮಾ ದೇವೇರು ಬಲ್ಲ ಳೆಂಬುವದಕ್ಕೆ ಏನು ಹೆಚ್ಚು ಕಡಿಮಿ ಅದೆ ಎಂವರೆ, ಪರಮಾತ್ಮನ ಮಹತ್ಮೆ ಅತ್ಯಾಶ್ಚರ್ಯ. ಇಷ್ಟು ಪರಿಯಲ್ಲಿ ಜೀವಾದಿಗಳನ್ನು ನೋಡಿವಕಾಲಕ್ಕೆ ನೋಡದೋಪಾದೇಲಿ ಇರುತ್ತಾಳೆ. ಅದು ಹ್ಯಾಗಂದರೆ ರಮಾದೇವೇರ ಮಹಾತ್ಮಿಯನ್ನು ಹೇಳಿ ಪರಮಾತ್ಮನ ಮಹತ್ಮಿ ಅತಿ ಗಹನವೆಂದು ಹೇಳಲ್ಪಡುತ್ತದೆ.

ಈ ನಿತ್ಯವಾದ ಅನಂತ ಮುಕ್ತಾಮುಕ್ತ ತ್ರಿವಿಧ ಜೀವರಾಶಿಗಳು ಮಹತತ್ವಾದಿ ಜಗತ್ತು, ಅವ್ಯಾಕೃತಾಕಾಶ ತನ್ಮಧ್ಯದಲ್ಲಿ ಭೂಮಂಡಲ ಮಧ್ಯ ಕಮಂಡಲ ಕಂಡೋಪಾದಿಯಲ್ಲಿ ಕಾಣುತ್ತದೆ. ಇಂಥಾ ಅವ್ಯಾ

ಕೃತಾಕಾಶಕ್ಕೆ ತಾನೆ ಆಧಾರಳಂತೆ. ಇಂಥಾ ರಮಾದೇವೇರು ಒಬ್ಬೊಬ್ಬ ಜೀವರಾಶಿಗಳ ಮಧ್ಯ ಜೀವನಲ್ಲಿ ಪರಮಾತ್ಮನ ಅನಂತ ರೂಪ ಕಾಣಥಾ ಳಂತೆ. ಆ ಭಗವದ್ರೂಪಗಳು ತನ್ನ ಒಂದೊಂದು ರೋಮಕೂಪಗಳಲ್ಲಿ ಅವ್ಯಾಕೃತಾಕಾಶದಿಂದ ಸಹಿತವಾದಂಥಾ ಅನಂತಾನಂತ ರೂಪಗಳನ್ನು ಕಾಣಥಾಳಂತೆ. ಆ ಭಗವದ್ರೂಪಗಳು ತನ್ನ ಒಂದೊಂದು ರೋಮ ಕೂಪಗಳಲ್ಲಿ ಅವ್ಯಾಕೃತಾಕಾಶದಿಂದ ಸಹಿತವಾದಂಥಾ ಅನಂತಾನಂತ ಬ್ರಹ್ಮಾಂಡಗಳು ಆನಿಸಿದ್ಧವಂತೆ. ಪರಮಾತ್ಮನ ರೂಪ ನಿತ್ಯ ಎಣಿಸ ಲಿಕ್ಕೆ ರಮಾ ದೇವೇರು ಅಸಮರ್ಥಳಂತೆ. ತತ್ಕಾರಣ ಜೀವರಾಶಿಗಳ ಗಣನೆಯನ್ನು ಕಾಣದವಳೋಪಾದಿ ಆಗಥಾಳಂತೆ. ಪರಮಾತ್ಮ ತನ್ನ ರೋಮಕೂಪದಲ್ಲಿ ಜಗತ್ತು ಇಟ್ಟುಕೊಂಡು ಇರೋವಂಥಾದ್ದು ತನಗೆ ಸ್ವಸ್ವರೂಪವಂತೆ. ಹೀಗಾದರೆ ಈ ಜಗತ್ತು ( ಸತ್ಯವೋ ಮಿಥ್ಯವೋ ಎಂದರೆ ನಮಗೆ ಹೇಳಲಿಕ್ಕೆ ಬಾರದು ) ನಾವು ಅಜ್ಞಾನಿಗಳು. ಹ್ಯಾಗಂದರೆ ಜಗತ್ತಿಗೆ ಪರಮಾತ್ಮ ಒಬ್ಬನೋ ಅನಂತನೋ ಎಂದರೆ ಒಬ್ಬನೇಎಂತ ಶಾಸ್ತ್ರಸಿದ್ಧ, ಅನಂತ ರೂಪಾತ್ಮಕನೆಂತಲೂ ಶಾಸ್ತ್ರಸಿದ್ಧ. ಅನಂತ ರೂಪಗಳು ನಿತ್ಯವಾದಂಥಾವು. ಒಬ್ಬ ಪರಮಾತ್ಮನಿಂದ ಅತ್ಯಂತ ಐಕ್ಯವು ಹ್ಯಾಗೆ ? ಒಬ್ಬ ಪರಮಾತ್ಮನಲ್ಲಿ ಇಂಥಾ ಜಗತ್ತು. ಪರಮಾತ್ಮ ಅನಂತ ರೂಪಾತ್ಮಕನಾದ ಕಾರಣ ಜಗತ್ತು ಅನಂತವೆಂದಕರಸುತದೆ. ನೀಚವಾದ ಜಗತ್ತಾದರೂ ಪರಮಾತ್ಮನ ಸಮ್ಮಂಧದಿಂದ ರಮಾದೇವೇರಿಗೆ ಆಶ್ಚರ್ಯ ಗೊಳಿಸುತ್ತದೆ.

ಅದು ಹ್ಯಾಗಂದರೆ ಒಂದು ದೀಪ ಕನಡಿಮನಿವೊಳಗೆ ಮಧ್ಯದಲ್ಲಿ ಟ್ಟರೆ ದೀಪ ಒಂದು ಶತಸಹಸ್ರವಾಗಿ ಹ್ಯಾಂಗ ಕಾಣತದೊ ಹಾಂಗೆ ಪರ ಮಾತ್ಮನ ಸಮ್ಮಂಧದಿಂದ ಜಗತ್ತು ಅಪರಿಮಿತ ಅನಂತವಾಗಿ ಕಾಣುತ್ತದೆ ಅಲ್ಲಿ ಉಪಾಧಿ ನಿಮಿತ್ಯ ಭ್ರಾಂತವಾಗಿ ಕಾಣತದೆ ಎಂದರೆ, ಕನ್ನಡಿ ಎಂಬೋದು ಉಪಾಧಿಕವಲ್ಲ, ನಿತ್ಯವಾದ ಕಾರಣ ಉಪಾಧಿ ಕೆಟ್ಟ ನಂತರದಲ್ಲಿ ದೀಪಾದಿ ವಸ್ತುಗಳು ತೋರದಕಾರಣ ಭ್ರಾಂತವೆನಬೇಕು ಹೊರ್ತಾಗಿ, ಉಪಾಧಿ ನಿತ್ಯವಾಗಿದ್ದರೆ ಏಕಪ್ರಕಾರ ತೋರದಿದ್ದರೆ ಭ್ರಾಂತ ವೆನಲಿಕ್ಕೆ ಬಾರದಲ್ಲಾ. ಕಾಂಬೋದು ಮೃಷಪು ಅಲ್ಲವಲ್ಲ. ತತ್ಕಾರಣ

ಪರಮಾತ್ಮನೆಂಬೋ ಉಪಾಧಿ ನಿತ್ಯರಿಗೆ ನಿತ್ಯವಾದಕಾರಣ ಪದಾರ್ಥಗಳು ಅತ್ಯಾಶ್ಚರ್ಯವಾಗಿ ರಮಾ ದೇವೇರು ಸಮುದ್ರಮಧ್ಯದಲ್ಲಿ ನಾವಿನೊಳಗೆ ಇದ್ದ ಪುರುಷ ಹ್ಯಾಗೆ ಸಮುದ್ರವನ್ನು ನೋಡಥಾಸೋ ಹೀಗೆ ಏಕಪ್ರಕಾರ ಅತ್ಯಾಶ್ಚರ್ಯವಾಗಿ ನೋಡಿ ಪಾರಗಾಣದಲೇ ಪರಮಾತ್ಮಗೆ ಶರಣು ಹೋಗಥಾಳಾದಕಾರಣ ಪರಮಾತ್ಮನ ಮಹತ್ಮೆ ಪರಮಾತ್ಮನೇ ಬಲ್ಲ. ತನಗೆ ತಾನೇ ಸರ್ವಜ್ಞ. ತನಗೆ ತಾನೇ ಸಂಪೂರ್ಣ. ರಮಾದಿ ಜಗತ್ತು ಅನಂತಾನಂತಗಳು, ಪರಮಾತ್ಮನ ಏಕದೇಶವಲ್ಲ. "ಅವ್ಯಕ್ತಾದಿ ತೃಣಾಂತಸ್ತು ವಿಷ್ಣುಡಾನಂದ ಭಾಗಿನಃ" ಎಂಬ ಪ್ರಮಾಣಾನುಸಾರ ಹೀಗೆ ಜೀವನಗುಣ ಹೇಳೋ ವ್ಯಾಜದಿಂದ ತಾರತಮ್ಯಾನುಸಾರ ಹರಿಗಳು ಪ್ರೇರಿಸಿದೋವಾದೆಯಲಿ ಬ್ರಹ್ಮದೇವರ ಸರ್ವಜ್ಞತಿ, ಪರಮಾತ್ಮನೇ ಸಂಪೂರ್ಣ ತನ್ನ ತಾನೇ ಬಲ್ಲ ಎಂಬೋ ಸರ್ವಜ್ಞತಿ ಹೇಳಲ್ಪಟ್ಟಿಥು.

## ಇನ್ನು ತ್ರಿವಿಧ ಜೀವನ ಸ್ವರೂಪ ಎಂಥಾದು ಎಂದರೆ

ತ್ರಿವಿಧಾದಿಕಾರಿಗಳಾದಂಥಾವರು ನಿತ್ಯರು. ಇವರಿಗೆ ಎಂದೆಂದಿಗೂ ಮೃತಿಯಿಲ್ಲ (ಜನಿಸೋಣ ಇಲ್ಲ) ಅಗ್ನಿ ಜಲ ವಾಯು ಶಸ್ತ್ರಾದಿ ರೋಗಗಳ ಉಪದ್ರವಇಲ್ಲ. ಇಂಥಾವಗ ಜಡ ಪ್ರಕೃತಿ ಸಮ್ಮಂಧದಿಂದ ಇಷ್ಟು ಉಂಟಾಗುತ್ತದೆ. ತ್ರಿವಿಧ ಸ್ವರೂಪ ಪ್ರತ್ಯೇಕ. ಪ್ರತ್ಯೇಕ ಹೇಳಲ್ಪಡುತ್ತದೆ.

## ಮುಕ್ತಿ ಯೋಗ್ಯರ ಸ್ವರೂಪ ಎಂಥಾದು ಎಂದರೆ

ಜ್ಞಾನಾನಂದವೇ ಶರೀರವಾಗಿ ಎಥಾಶಕ್ತಿ ಸ್ವರೂಪಾನುಸಾರವುಳ್ಳಂಥಾವರು. ಪರಮಾತ್ಮಗೆ ಭೇದವಾಗಿ ಸದ್ರುಶರು. ಸುಖಾನುಭವ ದೃಷ್ಟಾಂತ ಮಾತ್ರ ಪರಮಾತ್ಮನ ದರ್ಶನವುಳ್ಳಂಥವರು ತದಧೀನರು ಮುಕ್ತಿಯೋಗ್ಯರ ಜೀವರ ಸ್ವರೂಪಪ್ರಕಾರ ತಾರತಮ್ಯ ಯೋಗ್ಯತಾನುಸಾರ ಜ್ಞಾನಾನಂದವೇ ಶರೀರವಾಗಿ ವುಳ್ಳಂಥಾವರು ಅಚ್ಛೇದ್ಯ ಅಭೇದ್ಯರಾದಂಥವರು ಪರಮಾತ್ಮಗೆ ಸದೃಶ ಪ್ರತಿಬಿಂಬರು ಪರಮಾತ್ಮನೇ ಸ್ವಾಮಿ ಎಂದು ಉಪಾಸನೆ ಮಾಡುವಂಥ ದಾಸ್ಯಭಾವ ಭಕ್ತಿ ಸ್ವರೂಪದಲ್ಲಿ ಉಳ್ಳಂಥಾವರು. ಇಂಥಾ ಜೀವರ ಹೃದಯ ಕಮಲದಲ್ಲಿ ಇಹೋ ರೂಪ

ಗಳು ಜೀವಾಂಗುಟೆ ಮಾತ್ರ ಮೂರ್ತಿ, ಜೀವಾಂಗುಷ್ಟಾಗ್ರ ಮೂರ್ತಿ, ಜೀವಾಕಾರ ಮೂರ್ತಿ, ಪುರುಷ ಮೂರ್ತಿ ಸ್ತ್ರೀಯರಲ್ಲಿ ಸ್ತ್ರೀ ಮೂರ್ತಿ ಜೀವೇಂದ್ರಿಯುಗಳಲ್ಲಿ ದಾವ ದಾವ ಜೀವಾಕಾರದಂತೆ ತತ್ತ್ವಸ್ಥಾನವಾಗಿ ಯಾವತ್ತೂ ಜೀವರಲ್ಲಿ ಜೀವೋತ್ತಮ ವಿಡಿದು ತೃಣಾದಿ ಪರಿಯಂತಕ್ಕೂ ಯಾವತ್ತರೊಳಗಿದ್ದ ಅನಂತ ಮೂರ್ತಿ. ಶ್ರೀ ವಾಸುದೇವ ಸಂಕರುಷಣ ಪ್ರದ್ಯುಮ್ನ, ಜೀವನಾತ್ಮಕ, ಅನಿರುದ್ದ ಮೂರುತಿ, ತನ್ನ ಮಡದೇರಿಂದ ಸಹಿತನಾಗಿ ಪೊಪ್ಪುವರು. ಇನ್ನು ಉಳದಾದ ಐವತ್ತೊಂದು ವರ್ಣಗಳಲ್ಲಿದ್ದ ಭಗವದ್ರೂಪಗಳು ಜೀವನೊಳಗೆ ಸರ್ವದಾ ವಾಸಮಾಡಿಕೊಂಡು ಇರಥಾರೆ. ಪರಮಾತ್ಮ ಅಣುಪ್ರದೇಶದಲ್ಲಿ ಅತಿ ಪರಮಾಣು 'ಸೂಕ್ಷ್ಮ ತಾನಾಗಿ, ಮಹತ್ತು ಅಣುತ್ವ ಮಹದಾದಿ ಜಗತ್ತು ಅಲ್ಲೇ ತಾನು ಧರಿಸಿ ಜೀವಗೆ ಭಾರವಾಗದಲೇ ತಾನು ಭಾರವನ್ನು ತಾಳಿ, ಸರ್ವಾಂತರಿಯಾಮಿಯಾಗಿ ಸರ್ವರಿಗೆ ತಾನೇ ಆಸ್ಪದನೂ, ತಾ ಪರಿಪೂರ್ಣಕಾಮನಾಗಿ ಭಕ್ತರಿಗೆ ಬೇಕಾದ ಪುರುಷಾರ್ಥವನ್ನು ಕೊಡುವಂಥಾವನಾಗಿ ಶುಭಸಾರ ಆಸ್ವಾದಿಸುತ್ತ ಅಲ್ಲಿ ಇರಥಾನೆ. ಹೀಗೆ ಜೀವನಿಗೆ ಪರಮಾತ್ಮನು ತಿಳಿಯಗೊಡದ ಹಾಗೆ ತ್ರಿಗುಣಾತ್ಮಕವಾದ, ಷೋಡಶಕಳಾತ್ಮಕವಾದ ಲಿಂಗಶರೀರ ಸಮ್ಮಂಧಿಸಿ ಸಮಸ್ಥ ಜೀವರಿಗೂ ವ್ಯವಧಾನದಿಂದ ಆವರ್ಕ. ಅವರ ಜ್ಞಾನಾನಂದ ವ್ಯಕ್ತ ಮಾಡದೇ ನಿದ್ರಿಯಲ್ಲಿದ್ದ ಪರೋಕ್ಷವಾದಿ ಸಮಸ್ತ ಜೀವರನ ಮಾಡಿರುತ್ತದೆ. ಈ ಲಿಂಗಶರೀರಬಾಧೆ ಋಜುಗಣಕ್ಕೆ ಇಹೋದಿಲ್ಲ ಉಳಿದವರಿಗೆ ಕ್ರಮದಿಂದ ಪೊಬ್ಬು ತಾರತಮ್ಯಾನುಸಾರ ಇರುತದೆ. ಅದು ಕ್ರಮಾತು ಕೆಡತದೆ. ಪ್ರತಿಬಂಧಕ ಪರಮಾತ್ಮನ ಪ್ರಸಾದದಿಂದ ಕೆಡತದೆ

ಪ್ರತಿಬಂಧಕ ಇಹೋಪ್ರಕಾರ ಅಲ್ಲಿದ್ದ ಭಗವದ್ರೂಪಗಳು ತಿಳಿದು ಸ್ಮರಣೆ ಮಾಡೋಣದರಿಂದ ಕೆಡತದೆ. ಪರಮಾತ್ಮ ದಯಮಾಡಿ ಪ್ರತಿಬಂಧಕ ನಿವೃತ್ತ ಮಾಡಥಾನೆ.

## ಜೀವರಿಗೆ ಪ್ರತಿಬಂಧಕ ಪ್ರಕಾರ

ತ್ರಿಗುಣಾತ್ಮಕ ಲಿಂಗಶರೀರ ಮುಕ್ತಿ ಯೋಗ್ಯರಿಗೆ ಸತ್ವಾವರಣ ಜೀವರ ಸೂತ್ರದ ಮ್ಯಾಲೆ [ಮನ] ಆ ಮ್ಯಾಲೆ ರಜೋ ಆವರಣ

[ದಶೇಂದ್ರಿಯ] ಆವ್ಯಾಲೆ ತಮೋ ಆವರಣ [ಶಬ್ದ ಸ್ಪರ್ಶಾದಿ ಪಂಚ] ಏತದ್ವಿಪರೀತ ತಮೋ ಯೋಗ್ಯರಿಗೆ ಲಿಂಗದೇಹದಲ್ಲಿ ರಮಾದೇವಿಯರು ಶ್ರೀ ಭೂ ದುರ್ಗಾ ಮೂರು ರೂಪದಿಂದ ಅಭಿಮಾನಿ. ಗುಣನಿಯಾಮಕ ಭಗವದ್ರೂಪಗಳು ವಿಷ್ಣು ಬ್ರಹ್ಮ ರುದ್ರ ಎಂದು ಹೆಸರುಳ್ಳವನಾಗಿ ವಿಶ್ವ ತೈಜಸ ಪ್ರಾಜ್ಞ ಏಂದು ಭಗವದ್ರೂಪಗಳೇವೆ. ಈ ಭಗವದ್ರೂಪಗಳು ಬ್ರಹ್ಮ ವಾಯು ಸರಸ್ವತೀ ಭಾರತಿ ನಾಲ್ವರು ಆರಾಧನೆ ಮಾಡಥಾರೆ ಷೋಡಶ ಕಲೆಗಳಲ್ಲಿ ಕೇಶವಾದಿ ಹದಿನಾರು ಭಗವದ್ರೂಪಗಳಿವೆ. ಇಲ್ಲಿ ಕಾರಣರೂಪದಿಂದ ಈ ಲಿಂಗದಲ್ಲಿ ಎರಡು ಆಚ್ಛಾದನಗಳಿವೆ. ಜೀವಾಚ್ಛಾದಿಕ ಪರಮಾಚ್ಛಾದಿಕಗಳಿವೆ. ಇಲ್ಲಿ ೧ ತಮ ೨ ಮೋಹ ೩ ಮಹಾ ಮೋಹ ೪ ತಾಮಿಸ್ರ ೫ ಅಂಧತಾಮಿಶ್ರ ಈ ಪಂಚಪರ್ವ ಅಜ್ಞಾನ ಬಲಿ ಅವೆ. ಇವು ಮುಂದೆ ಉತ್ತರೋತ್ತರ ಪಾಪ ಮಾಡಲಿಕ್ಕೆ ಕಾರಣ ವಾಗುತ್ತವೆ. ಇದಕ್ಕೆ ಬಲವಾಗಿ ನಿಯಾಮಕನಾಗಿ ಕೃದ್ಧೋಲ್ಕಾದಿ ಐದು ಭಗವದ್ರೂಪಗಳಿವೆ. ಈಗ್ಗೆ ಆದಕ್ಕೆ ದಾರಿಗೂ ಉಪದ್ರವ ಬಾರ ಧಾಂಗ ಜರಾಮರಣ ಬಾರದಹಾಗ ಜನಾರ್ದನನಾಮಕ ಪರಮಾತ್ಮ ರಕ್ಷಿಸುತ್ತಾನೆ. ಇಲ್ಲಿ ದೈತ್ಯರ ಪ್ರಸಂಗವಿಲ್ಲ. ಇಂಥ ಲಿಂಗ ಅನಾದ್ಯನಂತ ಕಾಲದಲ್ಲಿ ಇರುತ್ತದೆ. ಸೃಷ್ಟಿ ಇಲ್ಲದಾಗೆ ಜೀವಗೆ ಅಸಂಬಂಧವಾಗಿರುತ್ತದೆ ಕೇವಲ ವ್ಯಥಾ ಕೊಡುವದಿಲ್ಲ. "ಯಮ್ಯೆ ವೇಷ ವೃಣುತೇ" ಎಂದು ಸೃಷ್ಟಿಕಾಲದಲ್ಲಿ ಪರಮಾತ್ಮ ದಾರಮ್ಯಾಲೆ ದೃಷ್ಟಿ ಹರದು ಸೃಷ್ಟಿಗೆ ತರಬೇಕೆಂದರೆ ಸೃಷ್ಟಿಗೆ ಬಾಹೋರು.

## ಗುಣ ವೈಷಮ್ಯ

ಲಿಂಗದಲ್ಲಿ ಬೆವರು ಹುಟ್ಟುತ್ತದೆ. ಬೆವರು ಹುಟ್ಟಿದ ಮೊದಲು ಗುಣಸಾಮ್ಯವೆನಿಸುವಾಗ ಸೃಷ್ಟಿಗೆ ಯೋಗ್ಯವಾದ ರಜೋ ಗುಣಗಳು ಸತ್ವದಲ್ಲಿ ಹತ್ತು [೧೦] ತಮದಲ್ಲಿ [೧] ತನ್ನ ಸ್ವರಾಶಿಲಿ ಒಂದು [೧] ಇರುತ್ತದೆ. ಬೆವತು ಉಬ್ಬಿದ ಬೀಜದೋಪಾದಿಯಲ್ಲಿ ಒಂದು ಗುಣ ದೊಳಗೆ ಒಂದು ಗುಣ ಕಲತರೆ ಅದೇ ಗುಣವೈಷಮ್ಯವೆನಿಸುತದೆ. ವೈಷಮ್ಯಪ್ರಕಾರ ಸತ್ವಗುಣದೊಳಗೆ ಕಲೆತ ೧೨ ರಜೋಗುಣ, ೧೦

ಸತ್ವಗುಣ ವಿಶೇಷಾಂಶವುಳ್ಳಂಥಾದ್ದು ಕೊಂಡು ಬರುತದೆ. ತಮೋ ಗುಣ ದಲ್ಲಿದ್ದ [೧] ಒಂದು ತಮೋಗುಣ ಕೊಂಡುಬರುತದೆ. ಅಂತೂ ರಜೋ ಗುಣ [೧೨] ಸತ್ವಗುಣ [೧೦] ಒಂದು ೧ ತಮೋಗುಣ, ಸ್ವರಾಸಿ ೧ ಅಂತೂ ೨೩ ಗುಣದಿಂದ ಬೀಜ ಉಬ್ಬಿದಹಾಗೆ ಲಿಂಗವಾಗಿ ಜೀವಗೆ ಸಂಬಂಧಿಸಿ ಅವನ ಪ್ರಕಾಶ ತನ್ನೊಳಗೆ ಮಾಡಿಕೊಳ್ಳತದೆ. ಸತ್ವಗುಣ ದಲ್ಲಿದ್ದ ರಜೋಗುಣಕ್ಕ ತಮುಸ್ಸಿನಲ್ಲಿದ್ದ ರಜೋಗುಣ [೧] ಈ ೧೨ ಗುಣಕ್ಕ ಶಕ್ತ್ಯಾದಿ ಭಗವದ್ರೂಪಗಳು. ಮುಂದೆ ಗುಣ ವೈಷಮ್ಯ ಶರೀರವೆಂದು ಕರಸುವದು ಸಕಲ ಪ್ರಾಣಿಗಳಿಗೆ ಮೋಕ್ಷಾಧಿಕಾರಿಗಳಿಗೆ ಏಕಪ್ರಕಾರ ಮುಂದೆ ಗುಣವುಳ್ಳ ಶರೀರ ಅಂಶಿ ಮುಂದೆ ಅಂಶದಿಂದ ಬೆಳಿತದೆ. ಹಾಗೆ ಭಗವ ದ್ರೂಪಗಳು ಅಲ್ಲೆಲ್ಲಿ ಪ್ರತ್ಯೇಕ ಪ್ರತ್ಯೇಕ ವ್ಯಕ್ತವಾಗಿರುತ್ತವೆ. ಆ ಭಗವ ದ್ರೂಪಗಳನ್ನು ಜ್ಞಾನಿಗಳು ಕಾಣಥಾರೆ. ಮಚ್ಛಾದಿ ರೂಪಗಳು ಸತ್ವಗುಣ ಹೆಚ್ಚುಬಂದಲ್ಲಿ ಇದ್ದಾರಷ್ಟೇ ? ಇಪ್ಪತ್ತುಮೂರು ಗುಣಗಳು ಮತ್ತು ಸತ್ವಗುಣ ಅಂಕುರ ವುಳ್ಳದ್ದಾಗಿ ಗುಣಗಳು ಬೆಳಿತವೆ. ಸತ್ವಗುಣ ಬಿಂದು ಒಂದಕ್ಕೆ ಹತ್ತು ಪೃಗ್ಗಳಿಸಿದರೆ ಹತ್ತು ಸತ್ವಾಂಶ ಈ ಸತ್ವಾಂಶ ಗುಣ ಗಳು ಒಂದೊಂದು ಬಿಂದು. ಸಾವಿರ ಬಿಂದುಗಳಿಂದ ಯುಕ್ತವಾಗಿ ಅದೆ. ರಜೋಬಿಂದು ಹನ್ನೆರಡು ಅಂಶದಿಂದ ಅದೆ, ತಮೋಗುಣ ಹತ್ತು ಅಂಶ ದಿಂದಅದೆ ಹೀಗೆ **೧೧೩ ನೂರಾಹದಿಮೂರು ಗುಣದಿಂದ ಸರ್ವರಿಗೂ ಅವ್ಯಕ್ತ ಶರೀರವೆಂದು ಲಿಂಗದಮ್ಯಾಲೆ ಆಯಿತು.** ಈ ಶರೀರದಲ್ಲಿ ಬ್ರಹ್ಮ ವಾಯು ಸರಸ್ವತಿ ಭಾರತೀ ಶರೀರಾಭಿಮಾನಿಗಳು. ಇಲ್ಲಿ ರಮಾ ರೂಪವು ಮುಖ್ಯಾಭಿಮಾನಿಯಾಗಿ [illegible] ರೂಪದಿಂದ ಇದ್ದು ಹಾಗೆ ಪರ ಮಾತ್ಮನು ನಾರಾಯಣಾದಿ ೧೦೦ ವಿಶ್ವಾದಿ (೮) ರೂಪ ಅನಿರುದ್ಧಾದಿ ೫ ರೂಪ ಹೀಗೆ ೧೧೩ ರೂಪದಿಂದ, ಅಭಿಮಾನಿಗಳಿಂದ ಪೂಜಾಗೊಳಥಾರೆ ಈ ಶರೀರಜ್ಞಾನ ಹರ ಮೊದಲಾದವರಿಗೆ ಇಲ್ಲ. ಅವರಿಗೆ ಅಭಿಮಾನ ಅವ್ಯಕ್ತ ಶರೀರಕಿಲ್ಲ. ಇದೇ ಬ್ರಹ್ಮಾಂಡಕ್ಕೆ ಮಹತತ್ವದೋಪಾದೆಯಲ್ಲಿ ಗುಣ ವೈಷಮ್ಯ ಗುಣತ್ರಯದೋಪಾದೆಯಲ್ಲಿ ಅವ್ಯಕ್ತ ಶರೀರದಿಂದ ಸರ್ವ ಜೀವರಿಗೆ ಅನಿರುದ್ಧ ಶರೀರ ನಿರ್ಮಾಣ. ಆ ಸಮಸ್ತ ದೇವತಿಗಳಿಗೆ ಬ್ರಹ್ಮಾಂಡ ಸೃಷ್ಟಿಯಾಗಿ ಬ್ರಹ್ಮಾಂಡ ನಿರ್ಮಾಣ ಸಮಯದಲ್ಲಿ ಈ

ಅನಿರುದ್ಧ ಶರೀರದೊಳಗೆ ಬ್ರಹ್ಮಾಂಡದಾವರ್ಣದೋಪಾದಿಯಲ್ಲಿ ಭೂತಾದಿ ಆಹಂಕಾರಾವರಣಗಳುಂಟು. ಇದರ ಜ್ಞಾನ ಅಭಿಮಾನಿ ದೇವತೆಗಳ ಹೊರ್ತು ಜೀವರಿಗೆ ಇಲ್ಲ. ಮುಂದೆ ಸ್ಥೂಲ ಶರೀರಾನಂತರ ಜ್ಞಾನ ಪ್ರಾಪ್ತಿಯಾಗೋದು.

**ಅನಿರುದ್ಧ ಶರೀರ ಎಷ್ಟು ಗುಣಗಳಿಂದ ಯುಕ್ತವಾಗಿದೆ** ಎಂದರೆ ಬ್ರಹ್ಮಾಂಡದಾವರ್ಣದೋಪಾದೆಯಲ್ಲಿ ೨೪ ಇಪ್ಪತ್ತುನಾಲ್ಕು ತತ್ವಗಳಿಂದ ಬ್ರಹ್ಮಾಂಡ ಸೃಷ್ಟಿಸಿದ ಪ್ರದ್ಯುಮ್ನ ನಾಮಕ ಪರಮಾತ್ಮ ಸೃಷ್ಟಿಮಾಡಿ ತನ್ನ ಸ್ವಸ್ವರೂಪವಾದಂಥ ಅನಿರುದ್ಧ ನಾಮಕ ಪರಮಾತ್ಮ ತಾನು ಬ್ರಹ್ಮಾಂತರ್ಯಾಮಿಯಾಗಿ ಇದ್ದು, ಸಮಸ್ತ ಅನಿರುದ್ಧ ಶರೀರಯುಕ್ತ ಜೀವರನ್ನು ತನ್ನಾಧೀನದಲ್ಲಿಟ್ಟುಕೊಂಡು ಅವರ ಕರ್ಮಾನುಸಾರ ದಾರ ದಾರ ದ್ವಾರಾ ದಾವ ದಾವ ಯೋನಿಯಲ್ಲಿ ಉತ್ಪನ್ನ ಮಾಡಬೇಕೋ ಅವರನ್ನ ಅನಾದಿ ಕರ್ಮ ಕಾರಣ ಮಾಡಿಕೊಂಡು ಆ ಕರ್ಮಾನುಸಾರ ಶರೀರ ನಿರ್ಮಾಣ ಮತ್ತು ಇಪ್ಪತ್ತುನಾಲ್ಕು ತತ್ವದಿಂದ ಯುಕ್ತವಾದಂಥ ಬ್ರಹ್ಮಾಂಡಸ್ಥ ಪಂಚಭೂತಗಳಿಂದ ಸ್ಥೂಲ ಶರೀರಮಾಡಿ, ಇದರಲ್ಲಿ ಅನಿರುದ್ಧ ಚತುರ್ದಶ ಭುವನದೋಪಾದೆಯಲ್ಲಿ ಹೃದಯ ಪ್ರವೇಶ ಅಷ್ಟದಳ ಇವನಲ್ಲಿಟ್ಟು ಪೂರ್ವಶರೀರ ಯುಕ್ತನಾದಂಥಾವನ ಪ್ರಕಾರ ಹೇಳಥಾರೆ.

## ಸ್ಥೂಲಶರೀರ ಪ್ರಕರಣ

ಬಾಹ್ಯ ಶರೀರ ವ್ಯಾಪಿಸಿ ಈ ಶರೀರದ ಸುಖ ದುಃಖಗಳು ತಾನೇ ಭೋಗಿಸುಥಾನೆ. ಕೊನಿಗೆ ಈ ಶರೀರವೇ ನಾನು ಇದರ ಸುಖವೇ ಸುಖ ಇದರ ಕಷ್ಟವೇ ಕಷ್ಟ. ಇದಕ್ಕೆ ಉತ್ಸಾಹವೇ ಉತ್ಸಹ. ಈ ಶರೀರಕ್ಕೆ ಹಿತ ಮಾಡಿದವರೇ ಆಪ್ತರು, ಆಹಿತ ಮಾಡಿದವರೇ ಅನಾಪ್ತರು ಎಂಬೋ ಜ್ಞಾನವೇ ಹುಟ್ಟಿಸಿ ಪೂರ್ವದಲ್ಲಿ ತಾನು ಮಾಡಿದ ಸ್ಥಿತಿ ತಿಳಿಸ ದಲೇ ಈ ಶರೀರದಲ್ಲಿ ತತ್ವ ನಿಯಾಮಕರೇ ಈ ಶರೀರದಲ್ಲಿ ಇದ್ದಾರೆಂದು ತಿಳಿಸದಲೇ ಅಹಂ ಮಮ ಎಂಬ ಜ್ಞಾನ ಕೆಡದಹಾಗೆ ಮಾಡಿ ಈ ಜ್ಞಾನ ದ್ವಾರದಿಂದ ಪುಣ್ಯಪಾಪ ಒಂದೇ. ಅನಾದಿ ಕರ್ಮದಿಂದ್ಲ ಉತ್ಪನ್ನ

ವಾದಂಥಾ ಶರೀರದಿಂದ ಅನಂತಕರ್ಮ ಬೆಳಸುಥಾನೆ. ಅದು ಹ್ಯಾಗಂದರೆ "ಮುನಿಃ ಸುಕರ್ಮ ಶೀಲೋಪಿ ಕುರ್ವನ್ನೇವ ದಿನೆದಿನೇ। ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಂ" ಎಂಬ ಪ್ರಮಾಣದಿಂದ ಈ ಪರಿಯಿಂದ ಕೇಳಲಿಕ್ಕ ಕರ್ಮ ಬೆಳಿತು. ಚತುರ್ದಶ ವರುಷ ಆರಂಭ ಮಾಡಿ ಕರ್ಮೋತ್ಪಾದನಕ್ಕ ಕಾರಣನಾಗುಥಾನೆ. ಮುನಿಯಾಗಿ ಇದ್ದ ಪಕ್ಷದಲ್ಲಿ ಒಂದು ಕರ್ಮ ತೀರಿಸಲಿಕ್ಕ ಮೂರುಸಾವಿರ ನೀಚ ಯೋನಿ ಬಾಹೋ ಕರ್ಮಕ್ಕ ಕಡಿಮಿ ಸಂಪಾದಿಸೋದಿಲ್ಲ. ಕರ್ಮ ಮಾಡಿದರೆ ಹೀಗಾಗುತ್ತಿದೆ. ಇದು ಮಹಾ ಭೀತಿ.

ಇನ್ನು ಸತ್ಕರ್ಮಾನುಷ್ಠಾನ ಮಾಡಿದವಗೆ ಈ ಅವಸ್ಥಿ ಇರಲಿಕ್ಕ ಇನ್ನು ಪರಮಾತ್ಮನ್ನ ಬಿಟ್ಟು ಏನು ಮಾಡದಲೇ ಸುಮ್ಮನೇ ಇದ್ದರೆ, ಉಕ್ತಾನುಷ್ಠಾನ ಮಾಡದೇ ಹೋದರೆ ಮಹಾ ದೋಷಬರುತ್ತದೆ. ಇದು ಬಿಟ್ಟು ಏನು ಮಾಡದಲೇ ಇದ್ದರೆ ಇದು ಮಹಾಭೀತಿ. ಇನ್ನು ಸತ್ಕರ್ಮಾನುಷ್ಠಾನ ಮಾಡಿದವಗೇ ಈ ಅವಸ್ಥಿ ಇರಲಿಕ್ಕ ಪರಮಾತ್ಮನ್ನ ಮತ್ತು ವಿಧ್ಯುಕ್ತಾನುಷ್ಠಾನ (ಕರ್ಮ) ಬಿಟ್ಟರೆ ಯೇಸು ಕೋಟಿ ಕರ್ಮ ಬೆಳಿತು ಎಂಬೋದು ಚಿತ್ರಗುಪ್ತರೇ ಬಲ್ಲರೇ ಹೊರ್ತು ಏಸು ಖರ್ವ ಕರ್ಮ ವಾಯಿತು ಎಂದು ದಾವನಿಂದ ಎಣಿಸಲಿಕ್ಕಶಕ್ಯ. ಹಾಗಾದರೆ ಭಕ್ತ ಜನರು ಪರಮಾತ್ಮನ ಪ್ರಸಾದದಿಂದ ಜನ್ಮಗಳನ್ನು ನೀಗುಥಾರೆಂದು ಪ್ರಮಾಣದಿಂದ ಸಿದ್ಧಃ ಜ್ಞಾನಿಗಳೂ ಅನುಭವ ಸಿದ್ಧವೆಂದು ಹೇಳಥಾರೆ. ಅದು ಕೂಡುವ ದಿಲ್ಲ ಎಂಬ ಶಂಕಾ ಬಂದರೆ

ಇವ ಎಂದಿನ ಪರಿಯಂತರ ದುಷ್ಟಾಭಿಮಾನದಿಂದ ನಾನು ನನ್ನದು ಎಂಬ ನೀಚ ಪದಾರ್ಥಗಳಲ್ಲಿ ಆಶೆವುಳ್ಳವನಾಗಿಹೋಣದರಿಂದ ಭಾಗೀರಥ್ಯಾದಿ ತೀರ್ಥ ಸ್ನಾನ ಫಲ ಕೃಚ್ಛ್ರ ಚಾಂದ್ರಾಯಣ ವೃತ ನೇಮದ ಫಲ, ಜೋತಿಷ್ಟೋಮಾದಿ ದಾನ ಧರ್ಮದ ಫಲಗಳಷ್ಟು ಜನ್ಮಕ್ಕ ಕಾರಣವಾಗುತ್ತವೆ. ಇನ್ನು ಅಜ್ಞಾನದಿಂದ ಅಧರ್ಮಾದಿಗಳು ಮಾಡಿದರಿಂದ ಹೇಳತಕ್ಕದ್ದೇನು ? ಈ ಕರ್ಮ ನಿವೃತ್ತಿಯು ಮೋಕ್ಷ ಹ್ಯಾಗೆಂದರೆ ಕರ್ಮದ ಸ್ಥಿತಿ ತಿಳಿದು ಶ್ರೀ ಗುಣೈಶ್ವರ್ಯ ಸಂಪನ್ನನಾದ ಶ್ರೀ ನಾರಾಯಣನಲ್ಲಿ ದತ್ತ ಚಿತ್ತವುಳ್ಳವನಾಗಿ ಅವನ ಅತಿ ಮಹತ್ಮೆ

ಸರ್ವತಂತ್ರ ಸ್ವತಂತ್ರ ಸರ್ವಾಂತರ್ಯಾಮಿಯಾಗಿ ಸರ್ವ ಕರ್ತೃನಾಗಿ ಸರ್ವರ ಯೋಗ್ಯತಾನುಸಾರ ಪ್ರವೃತ್ತಿ ನಿವೃತ್ತಿ ಕರ್ಮಗಳ ಅನೇಕ ಮಾಡಥಾನೆ. ಆತನೇ ಸರ್ವಾಂತರ್ಯಾಮಿಯಾಗಿ ಮಾಡದಲೇ ಹೋದರೆ ನಿತ್ಯಮುಕ್ತಳಾದ ರಮಾದೇವೇರು ಕಣ್ಣು ಹುಬ್ಬ ತಿರುವಲಾರಳು ಇನ್ನು ಬ್ರಹ್ಮಾದಿಗಳಿಗೆ ಕರ್ತೃತ್ವ ಹ್ಯಾಂಗ ಬಂದೀತು? ನಮ್ಮಂಥಾ ಭಣಗು ಜೀವರಲ್ಲಿ ದಾವ ಸ್ವತಂತ್ರ ಬಂದೀತೆಂದು ತಿಳಿದು ನಿಷೇಧ ಕರ್ಮದ ಭಯಬಿಟ್ಟು ಪರಮಾತ್ಮ ಮಾಡಿಸಿದ್ದೆ ಮಾಡುಥೇನೆ, ನಾನು ಮಾಡಲಿಲ್ಲ. ಅವ ಮಾಡಿಸಿದರೆ ಸರಿ, ಅವ ಮಾಡಿಸದೇ ಹೋದರೆ ದಾವ ಕರ್ಮ ಮಾಡಲಾರೆನೆಂದು ಪೂರ್ಣ ಭಕ್ತಿಪುಳ್ಳವನಾಗಿ ಅವನ ಧ್ಯಾನದಲ್ಲಿ ರತನಾಗಿ ಅನ್ಯ ವಿಷಯದಲ್ಲಿ ಲವಕಾಲ ಮೋಹ ಮಾಡದಲೇ ದಾರು ಇರುಥಾರೋ ಪರಮಾತ್ಮ ಅವನಿಂದ ಬ್ರಹ್ಮ ಹತ್ಯಾದಿ ದೋಷಗಳಾಗಿದ್ದರೂ ಸರಿಯೇವೆ, ಪರಮಾತ್ಮ ಪ್ರೀತನಾಗಿ ತನ್ನ ಅಪರೋಕ್ಷ ಕೊಟ್ಟು ಹಿಂದಿನ ಪ್ರಕಾರ ಅನಂತ ಜನ್ಮದ ಅನಂತ ಕರ್ಮಗಳ ದಹಿಸಿ ಅನಾದಿ ಕರ್ಮದೊಳಗೆ ಒಂದು ಕರ್ಮ ಹೋಗಿರಲಾಗಿ ಉಳದ ಶೇಷ ಪ್ರಾರಬ್ಧ ಕರ್ಮ ಮುಂದೆ ಕರ್ಮ ಬೆಳಸದಲೇ ಆ ಕರ್ಮದೊಳಗೆ ಉಪಮರ್ದದಿಂದ ತನ್ನ ಧ್ಯಾನದಿಂದ ಯುಕ್ತನ ಮಾಡಿ ಆ ಕರ್ಮ ಅನುಭವಕ್ಕೆ ತಂದು ಕೊಟ್ಟು ಆ ಕರ್ಮಾನುಭವವೇ ಮೋಕ್ಷ ಸಾಧನಮಾಡಿ ಜೀವನಾದ ಪ್ರತಿಬಿಂಬನ್ನ ಉದ್ಧಾರ ಮಾಡಥಾರೆ. ತತ್ಪ್ರಯುಕ್ತವಾಗಿ ಆ ಪರಮಾತ್ಮನ ಧ್ಯಾನ ಮಾಡಬೇಕಾದರೆ ಸ್ವಾಮಿತ್ವೇನ ಧ್ಯಾನ ಮಾಡಬೇಕು. ದೇಹನಿಯಾಮಕ ಪರಮಾತ್ಮನೇ ನಮಗೆ ಸ್ವಾಮಿತ್ವ ಅನುಬಂಧಿತ್ವ ಮೊದಲು ಇದ್ದಕಾರಣ ದೇಹಗತ ಪರಮಾತ್ಮನ ಧ್ಯಾನಮಾಡಬೇಕು.

## ಅನಿರುದ್ಧ ಶರೀರ ವಿಸ್ತಾರ (ವಿಚಾರ)

ಈ ದೇಹಕಿಂತಾ ಮುಂದಾಗೆ ಸಂಪಾದಿಸಿದ ಅನಿರುದ್ಧ ಶರೀರವಾದ ಕಾರಣ ಈ ದೇಹದಕಿಂತಲ್ಲ್ಯೂ ಅದು ನಿತ್ಯವಾಗಿರುತಿದ್ದಕಾರಣ ಆ ಶರೀರ ಸಂಗಡಲೇ ಬರುತಿದ್ದಕಾರಣ ಅನಿರುದ್ಧ ಶರೀರ ತಿಳಿಯತಕ್ಕದ್ದು. ಅವ್ಯಕ್ತ ಶರೀರದಲ್ಲಿ ೧೦೦ ಸತ್ವಗುಣ, ೧೨ ರಜೋಗುಣ, ೧ ತಮೋಗುಣ

ಈ ಪ್ರಕಾರ ನೂರಾಹದಿಮೂರು ಗುಣದಿಂದ ಯುಕ್ತವಾದ ಅವ್ಯಕ್ತ ಶರೀರದಿಂದ ಅನಿರುದ್ಧ ಶರೀರಕ್ಕೂ ೧೦೦ ನೂರು ಸತ್ವಗುಣ ಪಂದಕ್ಕ ಸಾವಿರ ಪ್ರಕಾರ ಜೆಳದರೆ ಲಕ್ಷ (೧೦೦೦೦) ಸತ್ವಗುಣವಾಯಿತು. ರಜೋಗುಣ ಪಂದಕ್ಕೆ ಹತ್ತು ಹೆಚ್ಚಿಸಿದರೆ ೧೨ ಕ್ಕೆ ೧೨೦೦ ರಜೋಗುಣ ವಾಯಿತು. ಒಂದು (೧) ತಮೋಗುಣಕ್ಕೆ ೧೦ ಹೆಚ್ಚಿಸಿದರೆ ೧೦ ತಮೋ ಗುಣವಾಯಿತು. ಹೀಗೆ ಒಂದುಲಕ್ಷದಾ ಹನ್ನೆರಡುನೂರು ಹತ್ತು ಗುಣ ದಿಂದ ಯುಕ್ತವಾದಂಥಾದ್ದು (೧೦,೧೨೧೦) ಅನಿರುದ್ಧ ಶರೀರ. ಈ ಶರೀರ ಅವ್ಯಕ್ತ (ತತ್ವ) ಶರೀರಕ್ಕ ಅಂಗಿಯೋಪಾದೆಯಲ್ಲಿ ಬಹು ಪದರ ಗಳಿಂದ ಬಹ್ಯಾವರಣದೋಪಾದೆಯಲ್ಲಿ ಅಂತಃ ಆವರಣದಿಂದ ಯುಕ್ತ ವಾಗಿ ಅವ್ಯಕ್ತ ಶರೀರಕ್ಕ ರಕ್ಷಕವಾಗಿದೆ. ಈ ಶರೀರದೋಪಾದೆಯಲ್ಲಿ ದಶೇಂದ್ರಿಯಗಳಿಂದ ಪಂಚಭೂತ ಪಂಚತನ್ಮಾತ್ರಗಳಿಂದ ಮನಸ್ಸಿನಿಂದ ಅಹಂಕಾರದಿಂದ, ಮಹತತ್ವ ಗುಣತ್ರಯದಿಂದ, ಹಾಗೆ ೨೪ ತತ್ವದಿಂದ ಯುಕ್ತವಾಗಿದೆ. ಇಲ್ಲಿ ತಮ್ಮ ತಮ್ಮ ತತ್ವದಲ್ಲಿ ತತ್ವಾಭಿಮಾನಿಗಳು ಜ್ಞಾನವುಳ್ಳವರಾಗಿ ಅಲ್ಲಿದ್ದ ಭಗವದ್ರೂಪ ಉಪಾಸನೆ ಮಾಡತಾರೆ. ಇಲ್ಲಿ ದೈತ್ಯರು ಇಂದ್ರಿಯಾಭಿಮಾನಿಗಳಾಗಿ, ತತ್ವಾಭಿಮಾನಿ ದೇವತೆಗಳ ಹೆಸ ರುಳ್ಳವರಾಗಿ ತಮೋಗುಣಾಶ್ರಯವಮಾಡಿ ಕೊಡುತ ಮಹಾ ದೋಷಗಳ ಮಾಡಿ ಪರಮಾತ್ಮನ ಅಪ್ರೀತಿ ಸಂಪಾದಿಸಿ ತಮಸ್ಸಿಗೆ ಬೀಳಥಾರೆ.

## ತಮಸ್ಸಿನ ದುಃಖವಿವರ

ತಮಸ್ಸಿನಲ್ಲಿದ್ದವಗೆ ಎಂಥಾ ದುಃಖವೆಂದರೆ ಮನುಷ್ಯಾಧಮ ನಾದಂಥಾವಗೆ ನಿತ್ಯ ಉಪವಾಸ ಸಂಕಟ, ಅನ್ನ ಸರ್ವಥಾ ಕಾಣದಲೇ ಇಹೋಣ, ನೀರಡಿಕಿಯಿಂದ ಪೀಡಿತವಾಗಿಹೋಣ. ನೀರು ಕಾಣದಲೇ ಇಹೋಣ. ಹೆಂಡರು ಮಕ್ಕಳು ಮೃತವಾದ ದಿವಸ ದುಃಖವಿಹೋಣ. ಹೀಗೆ ಏಕಪ್ರಕಾರ ಮನುಷ್ಯಾಧಮಗೆ ಇವಗಿಂತಾ ನೀಚರಾದ ಜಗನ್ಮಿಥ್ಯಾ ಜ್ಞಾನಿಪರಮಾತ್ಮಗೆ ಜಗತ್ತಿಗೆ ಐಕ್ಯಜ್ಞಾನವುಳ್ಳಂಥಾವ ಸಪ್ತದ್ವೀಪಾಧಿ ಪತಿ ಆಳುವ ಅರಸು ಚಾಂಡಾಲಗೆ ಸಿಗೋಣ. ತನ್ನ ಹೆಂಡತಿ. ರಾಜ್ಯಾಧಿ ಕಾರ, ಪರಾಧೀನವಾಗೋಣ, ತನ್ನ ಹೆಂಡತಿ ತನ್ನ ಎದುರಿಗೆ ಹಾದರ

ಮಾಡೋಣ, ಉಪವಾಸ ನೀರಡಿಕೆಯಿಂದ ಅನ್ನಪಾನ ಅಭಾವ. ಏಕ ಪ್ರಕಾರ ಮರಕ್ಕ ತೂಗಿಹಾಕಿ ಕಶಾಗಳಿಂದ ಪ್ರಹರಿಸುತ್ತಿದ್ದ ಕಷ್ಟ ಏಕಪ್ರ ಕಾರವಂತೆ, ಅವನ ಹೆಂಡರು ಮಕ್ಕಳಿಂದ ಮಲಮೂತ್ರ ಅವನ ಆಹಾ ರಕ್ಕೆ ಬಡಿಸೋಣ. ಇವಗೂ ನೀಚವಾದ ದೈತ್ಯರಿಗೂ, ವಿಷ್ಣು ವೈಷ್ಣವ ದ್ವೇಷಿಗಳಾದಂಥಾವರಿಗೆ ಸ್ವರ್ಗಾಧಿಪತಿತ್ವ, ಪರರು ಕಸಕೊಂಬೋಣ, ಕೀವು ರಕ್ತ ಕುಂಡದೊಳಗೆ ವಾಸಮಾಡಿಸೋಣ, ಶೀಸಾ ಕಾಸಿ ಆಸನಕ್ಕ ಕೂಡಸೋಣ, ಅವನ ಹೆಂಡರ ಮಕ್ಕಳಿಂದ ಅವನಮ್ಯಾಲೆ ಉಗಳಸೋಣ ಕಾದ ಹಂಚಿನಮ್ಯಾಲಿ ಮಲಗಸೋಣ, ಸರ್ವದಾ ಅಂಬಿಗೆ ಗುರಿಮಾಡಿ ನಿಲ್ಲಿಸಿ ಹೊಡಿಸಿಹೋಣ, ಹೀಗೆ ಏಕಪ್ರಕಾರ ಸರ್ವದಾ ದುಃಖವಿರುವದು. ಇನ್ನು ಪರಮಾತ್ಮಗೆ ವಾಯುದೇವರಿಗೆ ಮಹಾ ದ್ವೇಷಿಯಾದಂಥಾ ಕಲಿಗೆ ಮಲಮೂತ್ರ ಕೀವು ರಕ್ತವಾದಂಥಾ ಭಾಂಡದೊಳಗೆ ಇಟ್ಟು ಏಕಪ್ರಕಾರ ಕುದಿಸೋಣ. ತೈಲವೊಳಗೆ ಕರಗಸೋಣ, ಕಣ್ಣುವೊಳಗೆ ಸರ್ವದಾ ಹತ್ತು ಸಾವಿರ ಸೂಜಿಯಿಂದ ಚುಚ್ಚುತಿಹೋಣ, ಸರ್ಪಗಳಿಂದ ಕಚ್ಚಿ ಸೋಣ, ಶಸ್ತ್ರಗಳಿಂದ ಸರ್ವದಾ ಶರೀರದಲ್ಲಿ ಛೇದಿಸುತಿಹೋಣ ಪೂರ್ವ ದಲ್ಲಿ ಮಾಡಿದ ದೋಷ ಆರಸು ತನ್ನ ದೋಷಗಳನ್ನು ಉಚ್ಚರಿಸಿ ಹಂಗಿಸಿ ಬಾಧೆ ಬಡಿಸೋಣ. ಇಂಥಾ ಮಹಾವ್ಯಥೆ ಶ್ರವಣಮಾತ್ರದಿಂದ ಮೂರ್ಛೆ ಬಾಹುವಂಥಾ ಮಹಾ ವ್ಯಥೆ ಬಾಹುವಂಥಾ ದುಃಖವೇ. ಮುಂದೆ ಹೇಳ ಲಿಕ್ಕೆ ಶಕ್ಯವಿಲ್ಲ. ಇಷ್ಟು ಪರಮಾತ್ಮನ ದ್ವೇಷದೀದ ಅವಗೆ ಪ್ರಾಪ್ತ ವಾಗುತದೆ. ಇಂಥಾ ಮಹಾ ದುಃಖ ಬಡಸಲಿಕ್ಕ ಒಂದ ಶರೀರದಿಂದ ಸಾಧನ ಸಾಲದೆಂದು ಪರಮಾತ್ಮ ನೀಚ ದೈತ್ಯರಿಗೆ ದೋಷ ಮಾಡೋ ನಿಮಿತ್ಯ ಸರ್ವ ಇಂದ್ರಿಯಗಳ ಸ್ವಾಮಿತ್ವ ಕೊಟ್ಟಾನೆ. ಈ ಸ್ವಾಮಿತ್ವ ದೇವತೆಗಳಲ್ಲಿ ನಡೋಣಇಲ್ಲ. ಅವರಿಗೆ ಮಹಾ ಪ್ರಾರಬ್ಧವಿದ್ದರೆ ನೀಚ ದೇವತೆಗಳಿಗೆ ಉತ್ತಮ ದೇವತಿ ಕಲಿಯನ್ನು ದ್ವಾರ ಮಾಡಿಕೊಂಡು ತಾವೇ ಬಾಧಿಸಿ, ಪ್ರಾರಬ್ಧ ತೀರಿಸಿ ಆ ಪಾಪ ಕಲಿಗೆ ಕೊಡಥಾರೆ. ಈ ಲೋಕದಲ್ಲಿ ಭಗವದ್ಭಕ್ತನಲ್ಲಿ ಕಲಿ ವ್ಯಾಪಾರ ನಡಿಯೋದಿಲ್ಲ. ತಮ್ಮನ್ನ ತಿಳಿಯದಲೇ ಅಹಂಭಾವವವುಳ್ಳ ಅಜ್ಞಾನದಲ್ಲಿಟ್ಟು ಕಲಿನ ತನ್ನ ಸಾಧನ ಮಾಡಲಿಕ್ಕೂ ಅಪ್ಪಣೆ ಕೊಟ್ಟಾರೆ. ಚಾಂಡಲ ಬಂದು ದೇವರ ಮನಿ

ಯೊಳಗೆ ತಮ್ಮ ವ್ಯಾಪಾರ ನಡಸಿದರೆ ಬ್ರಾಹ್ಮಣಿಗೆ ಹ್ಯಾಂಗ ಪಾಪವೋ ಹಾಂಗೆ ಅಲ್ಪಾಧಿಕಾರಿಗೆ ಬಹುಕಾಲ ನರಕದಲ್ಲಿ ಪಾನಮಾಡಿ ದುಃಖ ಬಡುವಂಥಾ ಪಾಪ. ಕಲಿ ಪ್ರೇರಣೆಯಿಂದಲ್ಲ್ಯಾ ಅಹಂಭಾವ ಬುದ್ಧಿಯಿಂದಲ್ಲ್ಯಾ ಪ್ರಾಪ್ತವಾಗುತ್ತದೆಂದು ತಿಳಿದು ಅನಿರುದ್ಧ ಶರೀರದಲ್ಲಿದ್ದ ಭಗವದ್ರೂಪಗಳು ಸಮಗ್ರ ತತ್ವನಿಯಾಮಕರನ್ನ ತಿಳಕೊಂಡು ಸಕಲ ಜಗತ್ತಿನ ವ್ಯಾಪಾರ ಅವರಿಂದಲೇ ಆಗುತ್ತದೆಂದು ನಿಶ್ಚೈಸಿ, ಅವರ ಧ್ಯಾನ ಮಾಡಿದರೆ ಸಂಸಾರದಿಂದ ಮುಕ್ತನಾಗುತಿದ್ದಕಾರಣ

## ಅನಿರುದ್ಧ ಶರೀರದಲ್ಲಿದ್ದ ಭಗವದ್ರೂಪಗಳು

ಹೇಳಲ್ಪಡುತ್ತವೆ. ಆ ಶರೀರ ಅತಿ ಸೂಕ್ಷ್ಮ ಮಂದಮತಿಗಳ ದೃಷ್ಟಿಗೆ ಅಗೋಚರ ಜ್ಯೋತಿಯೋಪಾದೆಯಲ್ಲಿ ಹೊಳಿಯುತ್ತದೆ. ತತ್ವನಿಯಾಮಕರು ದೇವತೆಗಳು ಮಾತ್ರ ತಮ್ಮ ದಿವ್ಯ ದೃಷ್ಟಿಯಿಂದ ಪರಮಾತ್ಮನ ಪ್ರಸಾದದಿಂದ ಬಲ್ಲರು. ದೈತ್ಯರು ಅರಿಯರು. ಸ್ಥೂಲ ಶರೀರಕ್ಕ ಬಂದಮ್ಯಾಲೆ ದೇವರು ದೈತ್ಯರಿಂದ ಪ್ರಯೋಜನ ಮಾಡಸಥಾರೆ ಅಲ್ಲಿದ್ದ ತತ್ವ ನಿಯಾಮಕ ಗರುಡ ಶೇಷ ರುದ್ರ ಇವರ ಹೆಂಡರು. ಇಂದ್ರ ಕಾಮ ಅಹಂಕಾರಿಕ ಪ್ರಾಣ ಅನಿರುದ್ಧ ಬ್ರಹಸ್ಪತಿ ಪ್ರವಹ ವಾಯು ಯಮಾ ಸೂರ್ಯ ಚಂದ್ರ ವರುಣ ಅಗ್ನಿ ಮಿತ್ರನಾಮಕ ಸೂರ್ಯ ನಿರುಋತಿ ಅಶ್ವಿನಿ ದೇವತೆಗಳು ಗಣೇಶ ಕುಬೇರ ಜಯಂತ ಪ್ರಾಣ ಅಪಾನ ವ್ಯಾನ ಉದಾನ ಸಮಾನ ಧರಣಿ ಧನೇಶ್ವರ ಪುಷ್ಕರ ಈ ಸಮಗ್ರ ತತ್ವಾಭಿಮಾನಿಗಳು, ಕೇವಲ ಸೂಕ್ಷ್ಮ ರೂಪರಾಗಿ ಅನಿರುದ್ಧ ಶರೀರದಲ್ಲಿದ್ದಾರೆ. ಅಂತರಾವರಣದಲ್ಲಿ ನೀಚರು ಇಲ್ಲದೇ ಇಹೋಣ ಹೀಗೆ ಇದ್ಧಾರ. ತಮ್ಮ ತಮ್ಮ ತತ್ವದಲ್ಲಿ ತಮ್ಮ ತಮ್ಮ ವ್ಯಾಪಾರ ಮಾಡಥಾರೆ. ಅವರಿಗೆ ಪರಮಾತ್ಮ ನಿಯಾಮಕನಾಗಿ ನಡಸುಥಾನೆ. ದುಷ್ಟರಿಂದಲ್ಲಿ ಪರಮಾತ್ಮ ದೋಷಾದಿ ವ್ಯಾಪಾರ ತಿಳಿಸಿಕೊಳದಂತೆ ಮಾಡಥಾನೆ. ಸ್ಥೂಲ ಶರೀರಗಳಲ್ಲಿ ತಮೋ ಯೋಗ್ಯರಿಗೆ ಸಾಧನಗಳ ಸಾಗಸುಥಾನೆ.

ಅನಿರುದ್ಧ ಶರೀರದಲ್ಲಿ ವ್ಯಕ್ತವಾದ ಲಕ್ಷ ಗುಣಗಳಲ್ಲಿ ವಿಶ್ವಾದಿ ಸಹಸ್ರ ರೂಪಗಳು ನೂರು ಬಗೆಯಾಗಿ ಇಹೋವು. ಸರಸ್ವತೀ ಭಾರತೀ ಬ್ರಹ್ಮ ವಾಯು ಮೊದಲಾದವರು ಮಹತ್ತತ್ವಾದಿಗಳಲ್ಲಿ ಇದ್ದವರು ಅಹಂಕಾರ ತತ್ವಾದಿಗಳಲ್ಲಿ ನೀಚರಲ್ಲಿ ಅಂಶದಿಂದ ಸಮಗ್ರ ದೇವತೆಗಳು ಇದ್ದಾರೆ. ಈ ಸಮಗ್ರ ದೇವತೆಗಳು ಇಂದ್ರಿಯಗಳಿಗೆ ನಿಯಾಮಕರು. ಕಿರೇರ ವೊಳಗೆ ಹಿರೇರು ಸ್ವತಂತ್ರರಾಗಿದ್ದು ಕಿರೇರ ವ್ಯಾಪಾರವೇ ನಡಸುಥಾರೆ.

## ಅನಿರುದ್ಧ ಶರೀರವೊಳಗೆ ಅಂತರಾವರಣ

ವಿದ್ದ ಪ್ರಯುಕ್ತ ಹೇಳಥಾರೆ. ಒಂದರೊಳಗೆ ವೊಂದಾವರಣಗಳವೆ. ೧ ಅನಿರುದ್ಧಾವರಣ ೨ ಪ್ರದ್ಯುಮ್ನಾವರಣ, ೩ ಸಂಕರ್ಷಣಾವರಣ ೪ ವಾಸುದೇವಾವರಣ ೫ ನಾರಾಯಣಾವರಣ ಈ ಪ್ರಕಾರ ಒಂದಾ ವರಣದೊಳಗೆ ವೊಂದಾವರಣ ಅವೆ. ಅನಿರುದ್ಧಾವರಣದಲ್ಲಿ ಎರಡಾವರಣ ಗಳಿವೆ. ೧ ಪೃಥ್ವಿ ೨ ಗಂಧ ೩ ಘ್ರಾಣ ೪ ಉಪಸ್ಥ ತತ್ವದಾವರ್ಣ. ೧ ಅಪ್ಪು ೨ ರಸಾ ೩ ಜಿಹ್ವೆ ೪ ವಾಯು ಹೀಗೆ ಒಂದಾವರಣ, ಒಟ್ಟಿಗೆ ಎರಡಾವರಣ. ಅನಿರುದ್ಧಕೋಶ (ಅನ್ನಮಯಕೋಶ) ಇದರಲ್ಲಿ ೮ ತತ್ವ ಗಳು ಮೇಲೆ ಹೇಳಿದವು. ೨ ನೇ ಪ್ರದ್ಯುಮ್ನಾವರಣ, ಪ್ರಾಣಮಯ ಕೋಶದೊಳಗೆ (೩) ಮೂರಾವರಣ ೧ ತೇಜಸ್ಸು ೨ ರೂಪ ೩ ಚಕ್ಷು ೪ ಪಾದ ವಂದಾವರಣ. ೧ ವಾಯು, ೨ ಸ್ಪರ್ಶ, ೩ ತ್ವಕು ೪ ಪಾಣಿ ಈ ನಾಲ್ಕು ವಂದಾವರಣ ಹೀಗೆ ೧೨ ತತ್ವ ಮೂರಾವರಣ ಪ್ರದ್ಯುಮ್ನಾ ವರಣದಲ್ಲಿ ಅವೆ. ೧ ಮನಸ್ತತ್ವಾ, ೨ ಅಹಂಕಾರತತ್ವ, ತಮೋ ಆವರಣ, ಅಹಂಕಾರಾವರಣಗಳಾಗಿ ಇವೆರಡು ಸಂಕರಷಣಾವರಣ (ಮನೋಮಯಕೋಶ) ದಲ್ಲಿವೆ. ವಾಸುದೇವಾವರಣದಲ್ಲಿ ಮಹತತ್ವಾ ವರಣವೊಂದೇ ಇದೆ. ನಾರಾಯಣಾವರಣದಲ್ಲಿ ಅವ್ಯಕ್ತ ತತ್ವವಿದೆ. ಅಲ್ಲಿ ಗುಣತ್ರಯವಾದುದು ಅದೆ.

ಹೀಗೆ ಅನಿರುದ್ಧ ಶರೀರದೊಳಗೆ ಬ್ರಹ್ಮಾಂಡಾವರಣದೋಪಾದೇಲಿ ಪಂಚಕೋಶದಲ್ಲಿ ನವಾವರಣದಿಂದ ಯುಕ್ತವಾಗಿ ಅವೆ. ಈ ತತ್ವಗಳು ತದಭಿಮಾನಿ ದೇವತೆಗಳು ಅನಿರುದ ಶರೀರದಿಂದ ಕೂಡಿ ಬಗೆ ಬಗೆ

ಯೋನಿಗಳಲ್ಲಿ ಸ್ಥೂಲ ಶರೀರದಿಂದವ್ಯಕ್ತರಾಗಿ ಜೀವನಕರ್ಮ ಉಣಸು ವಂಥವರು ಆಗುಥಾರೆ. ಈ ಸಮಗ್ರ ಭಗವದ್ರೂಪಗಳು ವಿಶ್ವ ತೈಜಸ ಪ್ರಾಜ್ಞನ ಅಂಶಗಳಿವೆ. (೧ ಲಕ್ಷ ಗುಣಸತ್ವದಲ್ಲಿ ವಿಶ್ವಾದಿ ಸಹಸ್ರಬಗೆ) (೧೨೦೦ ರಜೋಗುಣದಲ್ಲಿ ತೈಜಾಂಶ) (೧೦ ತಮೋಗುಣದಲ್ಲಿ ಪ್ರಾಜ್ಞನ ಅಂಶ) ಈ ಗುಣಗಳು ಸ್ಥೂಲ ವ್ಯಕ್ತವಾದರೆ ಪರಮಾತ್ಮನ ಗುಣಗಳು ತತ್ಸತ್ತಾ ಪ್ರವೃತ್ಯರ್ಥ ತಾನು ಅನಂತಾನಂತ ರೂಪಗಳನ್ನು ಅವತರಿಸ ಥಾನೆ. ಬ್ರಹ್ಮದೇವರು ಲಿಂಗದಕೊನೆಯಲ್ಲಿ ವಾಸಮಾಡಿರುತ್ತಾರೆ. ಈ ಗುಣಗಳು ಜಡವಾದಂಥಾವು. ಜೀವನ ಸಾಧನಕ್ಕ ಸುಖ ದುಃಖ ಕಾರಣ, ಚೇತನವಲ್ಲ. ಚೇತನ ಹ್ಯಾಂಗಂದರೆ ಪರಮಾತ್ಮನ ಇಚ್ಛೆ ಇಂಥಾದ್ದು ಜಡಗಳಿಂದ ಜೀವರನ ಸುಖ ದುಃಖ ಬಡಸಥಾನೆ. ಈ ಅನಿ ರುದ್ಧ ಶರೀರದಲ್ಲಿ ವಿಶಿಷ್ಟನಾದ ಜೀವದೇಹ ಹೃದಯ ಮಧ್ಯದಲ್ಲಿ ಸುಷುಮ್ನಾನಾಡಿ ಮಧ್ಯದಲ್ಲಿ ಅಷ್ಟದಳ ಕಮಲದಲ ಚತುರ್ದಶದಳ ಕಮಲಾತ್ಮಕವಾಗಿ ಮುಖ್ಯ ಪ್ರಾಣನ ವಾದಾನುಸಸಿರಿ ಇರುಥಾನೆ. ಈ ಅನಿರುದ್ಧ ಶರೀರದಿಂದಲ್ಲೆ ಎಂಭತ್ತುನಾಲ್ಕು ಲಕ್ಷ ಯೋನಿಗಳ ಸ್ಥೂಲ ಶರೀರ ದೇವರು ನಿರ್ಮಾಣ ಮಾಡಥಾರೆ.

## ಸ್ಥೂಲ ಶರೀರ ಸಪ್ತಧಾತುಗಳ ವಿವರ

ಈ ಸ್ಥೂಲಶರೀರದ ವಿವರ ಶ್ರೀಹರಿ ಗುರುಗಳು ಪ್ರೇರಿಸಿದೋಪಾ ದೆಯಲ್ಲಿ ಬರೆಯಲ್ಪಡತದೆ. ಪಂಚಭೂತಗಳಿಂದ ಕೂಡಿ ಪಿತರ ಶರೀರ ದ್ವಾರಾ ಮಾತೃ ಉದರ ಪ್ರವೇಶಿಸಿ ಉತ್ಪನ್ನವಾದದ್ದು. ತ್ವಕು ಚರ್ಮ ಮಾಂಸ ರುಧಿರ ಮೇದಸ್ಸು ಮಜ್ಜಾ ಅಸ್ಥಿ ಸಪ್ತಧಾತುಗಳು ಪ್ರಥಿವ್ಯಾದಿ ಗಳಿಂದ ಉತ್ಪನ್ನವಾಗಿ ಇವಗೆ ದೇಹಾಕಾರ ವಾಗುತವೆ. ಈ ಸಪ್ತಧಾತು ಗಳೊಳಗೆ ೨೪ ತತ್ವ ಪಂಚಕೋಶದಿಂದ ಯುಕ್ತವಾಗಿರುತ್ತವೆ. ಇವನ ಕೆಡಸಲಿಕ್ಕ ಉಳಿಸಲಿಕ್ಕ ಒಂದು ಮನಸ್ಸು ಮುಖ್ಯೇಂದ್ರಿಯ. ಇಪ್ಪತ್ತು ನಾಲ್ಕು ತತ್ವ ತತ್ವಾಭಿಮಾನಿ ದೇವತಿಗಳಿಗೆ ನಿಯಾಮಕರು ಕೇಶವಾದಿ ೨೪ ರೂಪಗಳು ಶರೀರದಲ್ಲಿ ಚಕ್ಷುರ್ಮಯಕೋಶ ಶ್ರೋತ್ರಮಯಕೋಶ ವಾಙ್ಮಯಕೋಶ ಅವೆ. ಈ ನಾಮುಗಳಿಂದ ಭಗವಂತ ಇದ್ದಾನೆ.

ಶರೀರದ ಹೊರಗೆ ಅಂಗಿಯೋಪಾದೆಯಲ್ಲಿ ವಾಸುದೇವರೂಪ, ನಾರಾಯಣರೂಪ, ಆವರ್ಕವಾಗಿ ಅವೆ. ಮನುಷ್ಯರು ದಾರನ್ನು ಮುಟ್ಟಿದರೂ ಈ ರೂಪಗಳ ಜ್ಞಾನವುಳ್ಳವಗೆ ಮೈಲಿಗಿ ಇಲ್ಲ. ಅಂತರ ಬಹಿಸ್ಥ ಪರಮಾತ್ಮನ ರೂಪ ಹತ್ತುಲಕ್ಷ ಕವಚಾಕೃತಿಯಲ್ಲಿ ಅವೆ. ಈ ದೇಹದಲ್ಲಿ ಒಂಭತ್ತುಕೋಟಿ ಅತಿ ಸೂಕ್ಷ್ಮವಾಗಿ ರೋಮಗಳಿವೆ. ಒಂದೊಂದು ರೋಮದಲ್ಲಿ ಒಬ್ಬೊಬ್ಬ ತತ್ವಾಭಿಮಾನಿ ಇಲ್ಲಿ ೯ ಕೋಟಿ ದೇವತೆಗಳಿದ್ದಾರೆ. ಇವರು ಶತಸ್ಥರೊಳಗೆ ಪಂಚಪ್ರಾಣರ ತರುವಾಯ ದಲ್ಲಿರುವರೆಂದು ತಿಳಿಯತಕ್ಕದ್ದು. ಇಲ್ಲಿ ಪ್ರದ್ಯುಮ್ನ ನಾಮಕ ಪರಮಾತ್ಮ ಹಿಂಕಾರ ನಾಮದಲ್ಲಿ (೯) ಕೋಟಿ ರೂಪದಿಂದ ಇದ್ದಾನೆ. ಈ ರೋಮ ಗಳ ಮಧ್ಯದಲ್ಲಿ ಮೂರುವರೆಕೋಟಿ ತೀರ್ಥಗಳು ತದಭಿಮಾನಿ ದೇವತೆ ಗಳು ಇದ್ದಾರೆ. (೧) **ತ್ವಕ್ಕಿನಲ್ಲಿದ್ದ ಭಗವದ್ರೂಪಗಳ ವಿಸ್ತಾರ.** ಅನಿರುದ್ಧ ನಾಮಕ ಪ್ರಸ್ತಾವ ಎಂದು ಹೆಸರುಳ್ಳವನಾಗಿದ್ದಾನೆ. ಈ ತ್ವಕ್ಕಿ ನಲ್ಲಿ ರಮಾದೇವಿ ಇದ್ದು ದೇಹಕ್ಕ ಲಾವಣ್ಯ ಕೊಡಥಾಳೆ. ಇಲ್ಲಿ ಲಾವಣ್ಯ ಪ್ರದ ರಾಮರೂಪ. (೨) ಚರ್ಮದಲ್ಲಿ ನಿಯಾಮಕ ಪ್ರದ್ಯುಮ್ನ ಉದ್ಗೀಥ ಎಂದ ಹೆಸರುಳ್ಳವನಾಗಿದ್ದಾನೆ. ಅಲ್ಲಿ ಲಕ್ಷ್ಮೀಪತಿ ಆ ರೂಪದಿಂದ ಇವಗೆ ಮಹಾವ್ರಣಾದಿ ರೋಗಗಳ ನಿವಾರಣ ಮಾಡಥಾನೆ. (೩) ಮಾಂಸ ದಲ್ಲಿ ಸಂಕರಷಣ ನಾಮಕ ಪರಮಾತ್ಮ ಪ್ರತಿಹಾರ ಎಂದು ಹೆಸರುಳ್ಳವ ನಾಗಿದ್ದಾನೆ ಮತ್ತು ವಿಷ್ಣುನಾಮಕ ಪರಮಾತ್ಮ "ವರ" ರೂಪದಿಂದ ಹೆಸರುಳ್ಳವನಾಗಿದ್ದು ವಿಷ್ಣುನಾಮಕ ಪರಮಾತ್ಮ ಇವನ ಪುಷ್ಟಿವಂತನ ಮಾಡಿದ್ದಾನೆ ಮತ್ತು (೪) ರುಧಿರದಲ್ಲಿ ವಾಸುದೇವ ನಾಮಕ ಪರಮಾತ್ಮ ಉಪೇಂದ್ರ ಎಂತ ಹೆಸರುಳ್ಳವನಾಗಿದ್ದಾನೆ. ಅಲ್ಲಿ ಹರಿನಾಮಕ ಪರಮಾತ್ಮ ಶಾಂತ ಸಂವಿತು ಎಂದು ಹೆಶರುಳ್ಳವನಾಗಿದ್ದಾನೆ ಶರೀರಕ್ಕೆ ಬಲಪ್ರದ ನಾಗಿದ್ದಾನೆ. (೫) ಮೇದದಲ್ಲಿ ನಾರಾಯಣನಾಮಕ ಪರಮಾತ್ಮ ಮೇಧಾ ಎಂದು ಹೆಸರುಳ್ಳವನಾಗಿ ನಿಯಾಮಕನಾಗಿದ್ದಾನೆ. ಇಲ್ಲಿ ಷಡ್ಗುಣ ಸಂಪನ್ನನಾದಂಥ ವಿಷ್ಣು ಜೀವನಕ್ಕ ಐಶ್ವರ್ಯಪ್ರದನಾಗಿದ್ದಾನೆ. (೬) ಮಜ್ಜಾದಲ್ಲಿ ವಷಟ್ಕಾರನಾಮಕ ಪರಮಾತ್ಮ ಸಾರಾತ್ಮನೆಂದು ಹೆಸರುಳ್ಳವ ನಾಗಿದ್ದಾನೆ. ಅಲ್ಲಿ ಪರಮಾತ್ಮ ಮದ ದೇಹಕ್ಕ ಹುಟ ಸುತಿದ ಕಾರಣ

ಪರಮಾತ್ಮಗೆ ಮಜ್ಜಾ ಎಂದು ಬಾಹ್ಯ ಹೆಸರಿಲಿ ಕರಸುಥಾನೆ. (೭) ಈ ಶರೀರದಲ್ಲಿ ೩೬೦ ಅಸ್ಥಿಗಳವೆ. ಒಂದೊಂದು ಭಗವದ್ರೂಪಗಳವೆ. ಅಲ್ಲಿದ್ದ ಭಗವದ್ರೂಪಗಳ ನಿತ್ಯದಲ್ಲಿ ಸಂಧ್ಯಾಕಾಲದಲ್ಲಿ ನಿಯಾಮಕ ರೂಪಗಳು ಪರಮಾತ್ಮ ಅಸ್ಥಿಗಾಧಾರನಾಗಿ, ಅಸ್ಥಿಲಿ ಸಂಚರಿಸುತ್ತಿದ್ದ ಕಾರಣ ಪರಮಾತ್ಮ "ಅನ್ಥಾನಾದಸ್ಥಿ ನಾಮಾಸೌ" ಅಸ್ಥಿ ಎಂದು ಕರಸುತ್ತಾನೆ. ಮಜ್ಜಾದಿಂದಲೇ ಪುರುಷರಿಗೆ ರೇತಸ್ಸು ಉತ್ಪನ್ನವಾಗುತ್ತದೆ. ಆ ರೇತಸ್ಸಿನಲ್ಲಿ ಜೀವನಿಂದ ಸಹಿತನಾಗಿ ಮುಖ್ಯ ಪ್ರಾಣದೇವರು ಅನಿರುದ್ಧ ಶರೀರದಿಂದಲ್ಲ್ಯೂ ಅಲ್ಲಿ ಪ್ರತಿಷ್ಠಿತರಾಗುತ್ತಾರೆ. ಅವರಲ್ಲಿ ಪ್ರಾಣನಲ್ಲಿ ನಾರಾಯಣ ನಾಮಕ ಪರಮಾತ್ಮ ಪ್ರತಿಷ್ಠಿತನಾಗುತ್ತಾನೆ. ಆದಕಾರಣ ರೇತಸ್ಸು ಬಂದು ಗರ್ಭವಾಗುತ್ತದೆ. ಜೀವನಿಂದ ನಹಿತನಾಗಿ ಮುಖ್ಯ ಪ್ರಾಣದೇವರಿಂದ ಕೂಡಿ ಪರಮಾತ್ಮ ಅಲ್ಲಿ ರೇತಸ್ಸು ನಿಲ್ಲದೇಹೋದರೆ ರೇತಸ್ಸು ಬಂದು ವ್ಯರ್ಥವಾಗುತ್ತದೆ. ಅಸ್ಥಿಯಲ್ಲಿದ್ದ ಭಗವದ್ರೂಪಗಳು ಹಂಸನಾಮಕ ಪರಮಾತ್ಮ ಆದಿತ್ಯ ಎಂತ ಹೆಸರುಳ್ಳವನಾಗಿದ್ದಾನೆ. ಈ ಶರೀರದಲ್ಲಿ ೩೬೦ ಅಸ್ಥಿಗಳ ಮಧ್ಯ ಸಂಧಿಗಳವೆ. ಆ ಸಂಧಿಗಳಿದ್ದಲ್ಲೇ ಪಾದ ಹಸ್ತಾಂಗುಲ್ಯಾದಿಗಳು ಮುದಡಲಿಕ್ಕೆ ಚಾಚಲಿಕ್ಕೆ ಬರುತ್ತವೆ. ಆ ಸಂಧಿಗಳಲ್ಲಿದ್ದ ಭಗವದ್ರೂಪಗಳು ಮುನ್ನೂರಾ ಅರವತ್ತು ರಾತ್ರಿ ನಿಯಾಮಕ ರೂಪಗಳು ಈ ಕೀಲಿನಿಂದ ಸಹಿತವಾದಂಥ ಪರ್ವಗಳು (೩೬೦) ಭಗವದ್ರೂಪಗಳಿವೆ. ಆ ರೂಪಗಳು ೩೬೦ ಹಗಲಿಗೆ ನಿಯಾಮಕ ರೂಪಗಳು. ಪರ್ವದಲ್ಲಿದ್ದ ಪ್ರಯುಕ್ತ ಈ ರೂಪಗಳಿಗೆ ಪರ್ವ~~ಗಳ~~ ಎಂಬೋ ಹೆಸರು. ಅಸ್ಥಿಯಲ್ಲಿ (೩೬೦) ಸಂಧಿಗಳಲ್ಲಿ (೩೬೦) ಪರ್ವಗಳಲ್ಲಿ ೩೬೦ ಒಟ್ಟಿಗೆ ೧೦೮೦ ಭಗವದ್ರೂಪಗಳು ಸಂಧಿಕಾಲ ರಾತ್ರಿ ಹಗಲುಗಳಿಗೆ ನಿಯಾಮಕ ರೂಪಗಳು ತಿಳಿದು ಆ ರೂಪಧಾರಣ ಪ್ರೇರಣೆಯಿಂದ ನಾನು ಪ್ರವರ್ತಿಸುತ್ತೇನೆಂದು ಧ್ಯಾನ ಮಾಡಿದವಗೆ ಮೋಕ್ಷವಾಗುತ್ತದೆ. ಈ ದೇಹದಲ್ಲಿ ನವಕೋಟಿ ತತ್ವಾಭಿಮಾನಿಃ ದೇವತೆಗಳು ಪರಮಾತ್ಮನ ಆಜ್ಞೆಯಿಂದ ಪ್ರೇರಿಸುಥಾರೆಂದು ಪೂರ್ವದಲ್ಲಿ ಹೇಳಿದೆ. ಅದರ ಮಧ್ಯದಲ್ಲಿ ಮುಖ್ಯವಾಗಿ ತಿಳಿಯತಕ್ಕಂಥಾವು ಇಪ್ಪತ್ತು ನಾಲ್ಕು ತತ್ವಗಳು. ಇವರಿಗೆ ನಿಯಾಮಕ ಕೇಶವಾದಿ ಭಗವದ್ರೂಪಗಳು.

# ಮಾತೃಕಾ, ತತ್ವನ್ಯಾಸಪ್ರಕಾರ

ತ್ವಕ್ಕಿಗೆ ಅಭಿಮಾನಿ ಅಹಂಕಾರಿಕ ಪ್ರಾಣ. ಆತಗೆ ನಿಯಾಮಕ ಅನಿರುದ್ಧ ನಾಮಕ ಪರಮಾತ್ಮ. ಶಿರಸ್ಸಿನಲ್ಲಿ ಅಜನಾಮಕ ಪರಮಾತ್ಮ ಮುಖಕ್ಕಸ್ತುತಿ ಆನಂದನಾಮಕ ಪರಮಾತ್ಮ ಇದ್ದಾನೆ. ಶ್ರೋತ್ರಾಭಿಮಾನಿಗಳು ಚಂದ್ರಗೆ ಮುಖ್ಯವಾದ ಅಧಿದೇವತೆಗಳು, ಇವರು ಚಂದ್ರಕಳೆಗಳಲ್ಲಿದ್ದು ಇವರಿಂದಲೇ ವೃದ್ಧಿಹ್ರಾಸ ಕಾಣುತದೆ. ಚಂದ್ರಮಂಡಲ ಅತಿ ಸ್ವಚ್ಛವಾಗಿದೆ. ಅದಕ್ಕೆ ಸೋಮರಾಜಾ"ಎಂದು ಹೆಸರುವುಳ್ಳಂಥಾ ಪರಮಾತ್ಮ ನಿಯಾಮಕ. ಆ ಚಂದ್ರನಲ್ಲಿ ಧನ್ವಂತರಿ ಹಯಗ್ರೀವ ಚಿಂತಾಮಣಿ, ಹಂಸ, ವಾಮನ, ಅಜಾದಿರೂಪಗಳ ಸನ್ನಿಹಿತರಾಗಿದ್ದಾರೆ ಈ ಕರ್ಣದಲ್ಲಿ ಉಗ್ರರೂಪ ಊರ್ಜರೂಪಗಳಿವೆ. ಹಯಗ್ರೀವರೂಪದಿಂ ಓಂ ನಿಯಾಮಕರೂಪ, ವಿದಿಂಹೋ ನಿಯಾಮಕರೂಪ ಪ್ರದ್ಯುಮ್ನರೂಪ ಪ್ರದ್ಯುಮ್ನ ಆಕಾಶದಿಂದ ಸಹಿತನಾಗಿ ಸಮಗ್ರ ದೇಶವ್ಯಾಪ್ತವಾಗಿದೆ. ಬ್ರಾಹ್ಮರ ದಕ್ಷಣ ಕರ್ಣದಲ್ಲಿ ಭಾಗೀರಥ್ಯಾದಿ ನದಿಗಳಿವೆ. ಆದಕಾರಣ ಮೈಲಿಗಿಯಾದರೆ ಸ್ವಕರ್ಣ ಸ್ಪರ್ಶದಿಂದ ಶುದ್ಧನಾಗುಥಾನೆ.

ನೇತ್ರದಲ್ಲಿ ಇಂದ್ರರೂಪ ಈಶರೂಪ ಭಗವದ್ರೂಪಗಳವೆ. ಈ ಚಕ್ಷುಸ್ಸಿಗೆ ಅಭಿಮಾನಿ ಸೂರ್ಯ ಆತಗೆ ನಿಯಾಮಕ ಭಗವದ್ರೂಪ ನಾರಾಯಣ, ಅಧಿಷ್ಠಾನ, ಮೂರ್ಧ್ನಾರಾಜಾ, ಪವಿ, ಜನಿ, ವಸು, ಅಜಾದಿರೂಪಗಳು, ಕಪಿಲದತ್ತ, ಕೃತು, ಹತ್ತು ಹೀಗೆ ಭಗವದ್ರೂಪ, ನಿಯಾಮಕ ರೂಪಗಳು ದಕ್ಷಿಣಾಕ್ಷಿಯಲ್ಲಿ ವಿಷ್ಣುನಾಮಕ ಪರಮಾತ್ಮ ಸ್ತಂಭರೂಪಿಯಾಗಿರುಥಾನೆ. ರಮಾದೇವೇರು ಹಗ್ಗವಾಗಿ ಸುತ್ತಾ ಸುತ್ತಿಸಿಕೊಂಡು ಇದ್ದಾಳೆ. ಆ ಹಗ್ಗಕ್ಕೆ ವಾಯುದೇವರು ಆಕಳಕರುವಾಗಿ ಕಟ್ಟಿಸಿಕೊಂಡಿದ್ದಾರೆ. ಕಣ್ಣಿನ ಕೆಂಪು ರೇಖಾಗಳಲ್ಲಿ ರುದ್ರದೇವರು ಗೌತುಮನ ಹೆಸರಿನಿಂದ ಇದ್ದಾನೆ. ಬಿಳೀ ಗುಡ್ಡಿನಲ್ಲಿ ದೇವೇಂದ್ರ ವಶಿಷ್ಠನೆಂಬ ಹೆಸರಿನಿಂದ ಇದ್ದಾನೆ. ಕೃಷ್ಣಗುಡ್ಡಿನಲ್ಲಿ ಅಗ್ನಿ ಜಮದಗ್ನಿಯೆಂಬ ಹೆಸರಿನಿಂದ ಇದ್ದಾನೆ. ಕೃಷ್ಣತಾರಾ ಎಂದರೆ ಗುಡ್ಡಿಗೆ ಕೇವಲ ಅಗ್ರಭಾಗ ಅದು ಕನೀನಿಯೆಂದು ಕರೆಸುತದೆ. ಅಲ್ಲಿ ವಿವಸ್ವಾನ್ ನಾಮಕ ಸೂರ್ಯ

ವಿಶ್ವಾಮಿತ್ರ ಎಂಬ ಹೆಸರಿನಿಂದ ಇದ್ದಾನೆ. ಕಣ್ಣೀರಿನಲ್ಲಿ ವರುಣ ದೇವರು ಭರದ್ವಾಜ ಎಂಬೋ ಹೆಸರಿಲಿ ಹಾನೆ. ಕಣ್ಣುಕೆಳಗಿನ ರೆಪ್ಪೆಗಳಲ್ಲಿ ಪೃಥಿವಿಕಶ್ಯಪ ಹೆಸರ್ಲೆ ಇದ್ದಾಳೆ. ಮ್ಯಾಲಿನ ರೆಪ್ಪೆಗಳಲ್ಲಿ (ದ್ಯು) ಲೋಕಾಭಿಮಾನಿ ಭಾರತೀದೇವಿ ಅತ್ರಿ ಹೆಸರ್ಲೆ ಇದ್ದಾಳೆ. ವಾಯುದೇವರವಿನಹ ಎಷ್ಟು ಮಂದಿ ದೇವತೆಗಳು ಅಕ್ಷೀಣ ಮನಸ್ಸಿನಿಂದ ಇಲ್ಲಿದ್ದ ಭಗವದ್ರೂಪ ಆರಾಧನೆ ಮಾಡುಥಾರೆ. ಇನ್ನು ದಕ್ಷಿಣಾಕ್ಷಿಯಲ್ಲಿದ್ದದ್ದು ಅಗತ್ಯ ತಿಳಿಯತಕ್ಕದ್ದು. ಅಲ್ಲಿ ಅನಿರುದ್ಧ ನಾಮಕ ಪರಮಾತ್ಮ ವಿಶ್ವ ಎಂದು ಹೆಸರುಳ್ಳವನಾಗಿದ್ದಾನೆ. ಅತನರೂಪ. ಎರಡುಪಾದ ಹತ್ತೊಂಭತ್ತುಮುಖ ಹದಿನೆಂಟು ಪುರುಷಮುಖ, ಮಧ್ಯದಲ್ಲಿ ಗಜದೋಪಾದೆಯಲ್ಲಿ ಒಂದು, ಹೀಗೆ ಹತ್ತೊಂಭತ್ತು ಮುಖ. ಈತಗೆ ಹಸ್ತ ನಾಲ್ಕು, ಒಂದು ಆನೆಯ ಮುಖವೇ ಹಸ್ತ. ಇಂಥಾ ಅದ್ಭುತವುಳ್ಳ ಪರಮಾತ್ಮ ಅಷ್ಟದಿಕ್ಪಾಲಕರಿಂದ ಸೇವಿತನಾಗಿ ಜೀವರಿಗೆ ಸರ್ವದಾ ಜಾಗ್ರದಾವಸ್ಥಾ ಪ್ರೇರಕನಾಗಿದ್ದಾನೆ.

ಹೀಗೆ ಕಂಠದಲ್ಲಿ ಉದಾನ ನಾಮಕ ಪ್ರಾಣನಿಂದ ಸೇವಿತನಾಗಿ, ಪ್ರದ್ಯುಮ್ನ ನಾಮಕ ಪರಮಾತ್ಮ ವಿಶ್ವನೋಪಾದೆಯಲ್ಲಿ ತೈಜಸ ಎಂದು ಹೆಸರುಳ್ಳವನಾಗಿ ವಿಶ್ವನೋಪಾದೆಯಲ್ಲಿ ಮುಖ ಹಸ್ತಾದಿಗಳುಳ್ಳವನಾಗಿ ಸಮಸ್ತ ಜೀವರಿಗೆ ಸ್ವಪ್ನಪದಾರ್ಥಗಳನ್ನು ಆಕ್ಷಣ ಮನಸ್ಸಿನ ಸಂಸ್ಕಾರ ಉಪಾದಾನ ಮಾಡಿಕೊಂಡು ಸಮಸ್ತ ದೃಷ್ಟಪದಾರ್ಥ ಶ್ರುತ ಪದಾರ್ಥಗಳನ್ನು ಸೃಷ್ಟಿಮಾಡಿ ತೋರಿಸುಥಾನೆ. ಹಾಗೆ ಹೃದಯ ಪದ್ಮದಲ್ಲಿ ಕರ್ಣಿಕಾ ಗ್ರಸ್ಥನಾದಂಥ ಸಂಕರಷಣನಾಮಕ ಪರಮಾತ್ಮನೇ ಪ್ರಾಜ್ಞ ಎಂತ ಹೆಸರುಳ್ಳವನಾಗಿ, ಅಗ್ರೇಶನೆಂದು ಕರಿಸಿಕೊಂಬುವನಾಗಿ ಜೀವರಿಗೆ ಸುಪ್ತಿ ದ್ವಾರಾ ಸ್ವರೂಪ ಸುಖ ಮುಕ್ತಿಯೋಗ್ಯರಿಗೆ ತೋರಿಸಿ ಆ ವ್ಯಾಳ್ಯದಲ್ಲಿ ಜೀವರಿಗೆ ಅಂತರ್ಬಹಿಃ ಎಚ್ಚರ ಇಲ್ಲದವನ್ನ ಮಾಡತಾನೆ. ಮೂರು ರೂಪಗಳಿಂದ ಹುಟ್ಟಿಸಲ್ಪಟ್ಟ ಪದಾರ್ಥಗಳ ಸ್ವಾಮಿತ್ವದ ಭೋಗ ಪರಮಾತ್ಮನೇ ಸ್ವೀಕಾರಮಾಡುಥಾನೆ. ಸರ್ವದಾ ಜೀವ ವಿಶ್ವಮೂರ್ತಿ ಆಧೀನನಾಗಿರುಥಾನೆ. ಸ್ವಪ್ನವ್ಯಾಳ್ಯಿಗೆ ವಿಶ್ವಮೂರ್ತಿ ಜೀವನ ಪ್ರಕಾಶ ತೆಗದುಕೊಂಡು ಕಂಠದೇಶಕ್ಕ ತೈಜಸನಿದ್ದಲ್ಲಿಗೆ ಬರಥಾನೆ. ಸ್ವಪ್ನಾವಸ್ಥಿ ತೈಜಸ ತೋರಿಸಿದಮ್ಯಾಲೆ ಉಭಯ ಭಗವದ್ರೂಪಗಳು ಪ್ರಾಜ್ಞನಲ್ಲಕೂಡತವೆ.

ಜೀವನಪ್ರಕಾಶ ಆ ವ್ಯಾಳ್ಯದಲ್ಲಿ ದಾವ ಜೀವರೂ ತಮ್ಮ ಸುಖದಿಂದ ಅಂತ ರ್ಬಹಿಃ ಪದಾರ್ಥವನ್ನು ತಿಳೋದಿಲ್ಲ. ಆ ವ್ಯಾಳ್ಯದಲ್ಲಿ ಪರಮಾತ್ಮ ಮಹಾ ಜಾಗರೂಕನಾಗಿ ಜೀವನ ಸ್ವರೂಪ ಸುಖ ನಿರ್ಮಾಣ ಮಾಡಿಕೊಂಡಿರು ಥಾನೆ. ಆಗ್ಗೆ ಮುಖ್ಯ ಪ್ರಾಣದೇವರು ರಮಾಧೀನರಾಗಿರುತ್ತಾರೆ. ರಮಾ ದೇವೇರು ಪರಮಾತ್ಮನ (ಪ್ರಾಜ್ಞನ) ಆಲಿಂಗನ ಮಾಡೋದೇ ಜೀವನಿಗೆ ಸುಖ ಕೊಡಲು ಎಚ್ಚರವುಳ್ಳವರಾಗಿ ನೋಡುತ್ತ ಪರಮಾತ್ಮನ ಧ್ಯಾನದಲ್ಲಿ ತಮ್ಮ ಧ್ಯಾನವಲ್ಲಿ ತಮ್ಮ ವಶವಲ್ಲಿಟ್ಟುಕೊಂಡು ಪ್ರಾಜ್ಞನ್ನ ಕೂಡಥಾರೆ. ಆ ವ್ಯಾಳ್ಯದಲ್ಲಿ ಜೀವನ್ನ ಮುಖ್ಯ ಪ್ರಾಣದೇವರು ವಳಗೆ ಇಟ್ಟು ಆ ಜೀವನ್ನ ಸಹಿತನಾದಂಥಾ ಪ್ರಾಣನ್ನ ಪ್ರಾಜ್ಞನಾಮಕ ಪರಮಾತ್ಮನು ನುಂಗಿ ರಮಾ ಲಿಂಗನ ಮಾಡಥಾನೆ. ಆ ವ್ಯಾಳ್ಯದಲ್ಲಿ ಪ್ರಾಜ್ಞನಾಮಕ ಪರಮಾತ್ಮ ಮುಖ್ಯ ಪ್ರಾಣದೇವರದ್ವಾರಾ ಸಮಸ್ತ ಜೀವರಿಗೆ ಸ್ವರೂಪಸುಖ ವ್ಯಕ್ತ ಮಾಡಿ ಕೊಡಥಾನೆ. ಪರಮಾತ್ಮನ ಧ್ಯಾನದಲ್ಲಿರತಾನಾಗಿ ಆ ವ್ಯಾಳ್ಯ ವಾಯುದೇವರು ಭೂತಿನಾಮಕನಾದಂಥ ಪರಮಾತ್ಮನ್ನ ಭೂ ಎಂಬೋ ಶ್ವಾಸದಿಂದ ಪ್ರಶಂಸನಾ ಮಾಡಥಾನೆ. ಭೂವಾಚಕತ್ವ ಪರಮಾತ್ಮಗೆ ಪೂರ್ಣತ್ವವನ್ನು ಪ್ರತಿಪಾದಿಸುತ್ತದೆ. ಇದನ್ನು ತಿಳಕೊಂಡವರಿಗೆ ಮುಖ್ಯ ಪ್ರಾಣದೇವರು ತಾವು ಮಾಡಿದ ಆರಾಧನಾ ಫಲಾ ಸತ್ವ ಜೀವರಿಗೆ ಕೊಡ ಥಾನೆ. ಅಯೋಗ್ಯರು ಪರಮಾತ್ಮನ ಆರಾಧನೆಯಲ್ಲಿ ಹೀನರಾದ ಪ್ರಯುಕ್ತ ಅಭೂ ಎಂದು ವುಪಾಸನಾಮಾಡಿ ಆ ಅಧಿಷ್ಠಾನಗತ ಜೀವರಿಗೆ ದುರ್ಗತಿ ಕೊಡಥಾನೆ. ತತ್ಕಾರಣ ಯೋಗ್ಯರಾದವರು ಸುಷ್ತಿವ್ಯಾಳ್ಯದಲ್ಲಿ ಮುಖ್ಯ ಪ್ರಾಣದೇವರು ಪರಮಾತ್ಮನ ಭೂ ಎಂಬೋ ಶ್ವಾಸದಿಂದ ಆರಾಧನೆ ಮಾಡಥಾನೆಂದು ತಿಳಿಯಬೇಕು. ಪುನಃ ವಿಶ್ವಮೂರ್ತಿ ತೈಜಸನ್ನ ಕೂಡಿ ಕೊಂಡು ಪ್ರಾಜ್ಞನ್ನ ಬಿಟ್ಟು ಕಂಠದೇಶಕ್ಕೆ ಬಂದರೆ ಪುನಃ ಸ್ವಪ್ನವಾಗು ತ್ತದೆ. ಆ ವ್ಯಾಲೆ ತೈಜಸನ್ನ ಬಿಟ್ಟು ವಿಶ್ವಜೀವನಪ್ರಕಾಶ ತೆಗೆದುಕೊಂಡು ಅಕ್ಷಿಗೆ ಬಂದರೆ ಜಾಗ್ರತಿಯಾಗುತ್ತದೆ. ಮುಂದೆ ವಾಸುದೇವನಾಮಕ ಪರಮಾತ್ಮ ತುರೀಯಯೆಂದು ಹೆಸರುಳ್ಳವನಾಗಿದ್ದಾನೆ.

ವಾಸುದೇವ ಈ ಶರೀರದಲ್ಲಿ ದ್ವಾದಶಾಂಗುಲಿಮೇಲೆ ಇದ್ದಾನೆಂದು ಹಿರೇರು ಹೇಳೋ ಕ್ರಮ. ವಾಸುದೇವ ನಾಮಕ ಪರಮಾತ್ಮ ತುರಿಯ

ಎಂದು ಹೆಸರುಳ್ಳವನೇ ಸೂರ್ಯಮಂಡಲದಲ್ಲಿದ್ದು ಪುರುಷರ ಆಯುಷ್ಯ ಕಾಲವೆಂಬ ಮಾನದಿಂದ ಅಳದು ಹಿಂದಮಾಡುಥಾನೆ. ಈ ವಾಸುದೇವ ಸೂರ್ಯಾಂತರ್ಗತನಾಗಿ ದಕ್ಷಣಾಕ್ಷಿಯಲ್ಲಿರಥಾನೆ. ಸೂರ್ಯಾಂತರ್ಯಾಮಿ ವಾಸುದೇವ ನಾಮಕ ಪರಮಾತ್ಮನೇ ಇವನ ಅಕ್ಷಿಬಿಟ್ಟು ತನ್ನ ಮಂಡಲಕ್ಕೆ ಹೋಗೋಣ ಆ ವ್ಯಾಳ್ಯ ಇವನ ಕಣ್ಣು ಮಂಜಾಗಿ ಪದಾರ್ಥಗಳು ಕಾಣೋದಿಲ್ಲ. ಆ ವ್ಯಾಲೆ ಆ ಪುರುಷ ೭ ದಿವ್ಸ ಅಧಿಕವಾಗಿ ಬದುಕುವದಿಲ್ಲ. ಈ ಚಕ್ಷುಸ್ಥಾನದ ಪರಮಾತ್ಮ ಬಹು ಸುಂದರನಾದ ವಾಮನನು ಸರ್ವದಾನಿಸ್ಸಂಗನಾದ ಪ್ರಯುಕ್ತ ಚಕ್ಷು ಅಸಂಗವಾಗಿ ಸರ್ವ ಪದಾರ್ಥ ಗ್ರಹಿಸುತ್ತದೆ.

ನಾಸಾಭಿಮಾನಿಗಳು ಅಶ್ವಿನೀ ದೇವತೆಗಳು ದೇವತೆಗಳ ಮನೆ ವೈದ್ಯರು. ಅವರಲ್ಲಿ ಧನ್ವಂತರಿ ನಾಮಕ ಪರಮಾತ್ಮ ಇದ್ದಾನೆ. ಅವರ ಮುಖದಿಂದ ಪರಮಾತ್ಮ ರೋಗ ನಿವಾರಕ. ಋತುಂಭರ ಋಭುಃ ಎರಡು ಭಗವದ್ರೂಪಗಳು ನಾಸಿಕಾ ಉಭಯಪುಟದಲ್ಲಿ ಇದ್ದಾರೆ. ನಾಸಿಕಾ ಕೊನೆಯಲ್ಲಿ ಪರಮಾತ್ಮನ ಆಜ್ಞೆಯಿಂದ ಸೂರ್ಯ ಲೋಕವಿದೆ. ಆ ಮಂಡಲದಲ್ಲಿ ಇದ್ದಂಥ ವಿಷ್ಣುನಾಮಕ 'ಇರಮಾ' (ಹಿರಮಾ) ಎಂದು ಹೆಸರುಳ್ಳವನಾಗಿದ್ದಾನೆ. ಇಚ್ಛಾನುರೂಪ ಸುಖವುಳ್ಳವನಾಗಿ ಧರಿಸುವಂಥವರು ಎಂದು ಇಚ್ಛಾನಂದ ಹೆಸರುವುಳ್ಳಂಥಾತನಾಗಿ, ಸ್ವಾಮಿಯಾಗಿ ವ್ಯಾಪ್ತನಾಗಿದ್ದ ಪ್ರಯುಕ್ತ, ಹಿರಣ್ಮಯಾ ಎಂದು ಹೆಸರುಳ್ಳವನಾಗಿ, ಸೂರ್ಯನಲ್ಲಿ ಇದ್ದಾನೆ. ಮನುಷ್ಯರು ಬಿಡೋ ಶ್ವಾಸದಲ್ಲಿ ಭಾರತಿ ಅಭಿಮಾನಿ ಊರ್ಧ್ವ ಶ್ವಾಸದಲ್ಲಿ ಮುಖ್ಯ ಪ್ರಾಣದೇವರು ಮುಖ್ಯಾಭಿಮಾನಿಗಳು. ಇನ್ನು ಅವಾಂತರಭಿಮಾನಿಗಳು. ಸೂರ್ಯ ದಕ್ಷಿಣ ಶ್ವಾಸದಲ್ಲಿ, ವಾಮ ಶ್ವಾಸದಲ್ಲಿ ಚಂದ್ರ, ಶ್ವಾಸ ಮುಖ್ಯ ಪ್ರಾಣದೇವರು ಮಾಡುವ ಜಪ, ಹಂಸನಾಮಕ ಪರಮಾತ್ಮನ್ನ ಪ್ರತಿಪಾದಿಸುತ್ತದೆ. ಹಂಸನಾಮಕ ಪರಮಾತ್ಮನೇ ಪ್ರಾಣನಲ್ಲಿ ಗುಪ್ತನಾಗಿದ್ದಾನೆ. ಆದಕಾರಣ ಪ್ರಾಣಾಯಾಮದಿಂದ ಶ್ವಾಸ ನಿರೋಧಮಾಡಿ, ಉದರದಲ್ಲಿ ಪೂರ್ಣ ಮಾಡಿದರೆ, ಸಮಸ್ತ ಪಾಪಗಳನ್ನು ಪರಿಹರಿಸುತ್ತಾನೆ. ತತ್ಕಾರಣ ಜ್ಞಾನಿಗಳು ಈ ವಿಷಯದಲ್ಲಿ ಅಭ್ಯಾಸಮಾಡತಕ್ಕದ್ದು.

ಲ್ರುಶ ನಾಮಕ ಪರಮಾತ್ಮ ಲ್ರೂಜ ನಾಮಕ ಪರಮಾತ್ಮ ಉಭಯ ಗಂಡಸ್ಥಳದಲ್ಲಿ ಇದ್ಧಾರೆ. ಏಕಾತ್ಮನಾಮಕ ಐರನ ನಾಮಕ ಪರಮಾತ್ಮ ಉಭಯ ತುಟಿಗಳಲ್ಲಿ ಇದ್ಧಾರೆ. ಓಜೋಭೃತ ನಾಮಕ ಪರಮಾತ್ಮ ಔರಸನಾಮಕ ಪರಮಾತ್ಮ ದಂತ ಪಂಙ್ತಿಗಳಲ್ಲಿ ಇದ್ದಾರೆ. ಜಿಂಹ್ವಾಭಿ ಮಾನಿ ವರುಣ ಆತಗೆ ನಿಯಾಮಕ ಮಚ್ಛಮೂರ್ತಿ ವಾಗೀಂದ್ರಿಯದಲ್ಲಿ ಅಗ್ನಿ ಅಭಿಮಾನಿ ಆತನಲ್ಲಿ ವಿಷಾಕೃತಿ ನಾಮಕ ಪರಮಾತ್ಮ ಇದ್ದಾನೆ. ಹೀಗೆ ರಾತ್ರಿ ಸೂಕ್ತ ಪ್ರತಿಪಾದ್ಯನಾದಂಥಾತ ಅರ್ಧಗರ್ಭ ನಾರಾಯಣೀ ರೂಪ ಪರಮಾತ್ಮ ವಾಚ್ಯದಲ್ಲಿ ಇದ್ದಾನೆ. ಸರಸ್ವತಿ ವಾಕ್ಯದಲ್ಲಿ ಅಭಿಮಾನಿ ಮುಖ್ಯ ಪರಮ ಮುಖ್ಯ ತಿಳಕೋಬೇಕು. "ತತ್ರ ವಾಗೀಶ್ವರಃ ಸರ್ವ ಪಾಲನಾದಪಿ ಸರ್ವತಃ ವಿಶಿಷ್ಟತ್ವಾತ್ಪವಿಪ್ರೋಕ್ತಾ ಪ್ರಲಿನಾಖಿಲ ಕುತ್ಸಿತಃ ಕುಲಿತ್ಯುಕ್ತೊ ಹರಿಃ ಸಾಕ್ಷಾತ್ ಸ್ತ್ರೀ ರೂಪೋ ಹಯಶೀರ್ಷಕಃ ಯೋಹಯಾಸ್ಯ ಮುಪಾಸೀತ ತಸ್ಯವಿದ್ಯಾಫಲಿಷ್ಯತಿ"ಇತಿ ಮಾನಸಸ್ಮೃತಿಃ

ಎರಡು ಹಸ್ತಗಳಿಗೆ ದಕ್ಷ ಪ್ರಜೇಶ್ವರ ಅಭಿಮಾನಿ ಬಲಗೈಯಲ್ಲಿ ಮಧುಸೂದನ ನಾಮಕ ಪರಮಾತ್ಮ ಸಂಧಿಗಳಲ್ಲಿ ೧ ಕಪಿಲ ೨ ಖವತಿ ೩ ಗರುಡ ೪ ಘರ್ಮ ೫ ಜಂಸಾರ, ಅಂತು ಐದು ಭಗವದ್ರೂಪಗಳು ದಕ್ಷಣಾಂಗುಷ್ಟಬಲ ಮೂಲ ಹಸ್ತದಲ್ಲಿ ಬ್ರಹ್ಮತೀರ್ಥವದೆ. ಕನಿಷ್ಠಾಂಗುಲಿ ಮೂಲದಲ್ಲಿ ಪ್ರಜಾಪತಿ ತೀರ್ಥವದೆ. ಅದರಿಂದ ಋಷಿಗಳಿಗೆ ತರ್ಪಣ ಮಾಡಿದರೆ ತೃಪ್ತಿ. ತರ್ಜನೀ ಮೂಲದಲ್ಲಿ ಪೈತ್ರಿಕ ತೀರ್ಥವದೆ. ಅಂಗು ಲ್ಯಗ್ರದಲ್ಲಿ ದೇವ ತೀರ್ಥವದೆ. ಕರಮಧ್ಯದಲ್ಲಿ ಅಗ್ನಿ ತೀರ್ಥವದೆ. ಈ ಪಂಚ ತೀರ್ಥಗಳ ತಿಳಿದು ಆವರ ದ್ವಾರಾ ಮಾಡಿದ ಕರ್ಮ ಅಕ್ಷಯವಾಗು ತ್ತದೆ. ಎಡಗೈಗೆ ಶ್ರೀಧರ ನಾಮಕ ಪರಮಾತ್ಮನಿಯಾಮಕ. ಸಂಧಿಗಳಲ್ಲಿ ೧ ಚಾರ್ವಾಂಗ ೨ ಛಂದೋಗಮ್ಯ ೩ ಜನಾರ್ದನ ೪ ಝುಟಿತಾರಿ, ೫ ಞಾಮ ಹೀಗ ಪಂಚ ಭಗವದ್ರೂಪಗಳಿವೆ.

ಹೊಕ್ಕಳೊಳಗೆ ಮೂಲ ಸ್ಥಾನದಲ್ಲಿ ಮನು ನಾಮಕ ಪರಮಾತ್ಮ ಕೂರ್ಮರೂಪದಲ್ಲಿ ಇದ್ಧಾನೆ. ದಕ್ಷಣ ಪಾರ್ಶ್ವದಲ್ಲಿ ಮೂಲಸ್ಥಾನಕ್ಕೆ ಪರ' ನಾಮಕ ಪರಮಾತ್ಮ ವಾಮಪಾರ್ಶ್ವಕ್ಕ ಫಲಿ ನಾಮಕ ಪರಮಾತ್ಮ

ಪೃಷ್ಠಾಂಶದಲ್ಲಿ ಬಲಿನಾಮಕ ಪೃಷ್ಠ ಪಾರ್ಶ್ವಕ್ಕೆ ಭಗನಾಮಕ ಪರಮಾತ್ಮ ಹೃದಯದಲ್ಲಿ ಯಜ್ಞನಾಮಕ ಪರಮಾತ್ಮ ಕಟಿಪ್ರದೇಶದಲ್ಲಿ ಅನಿರುದ್ಧ ನಾಮಕ ಪರಮಾತ್ಮ ಗುಹ್ಯದಲ್ಲಿ ಸ್ವಾಯಂಭು ಅಭಿಮಾನಿ ಆತನಲ್ಲಿ ಹರಿನಾಮಕ ಪ್ರಜಾಪತಿ ನಾಮದಲ್ಲಿ ಇದ್ದಾನೆ. ರೇತಸ್ಸಿಗೆ ಅಭಿಮಾನಿ ಸೂರ್ಯ ಆತನಲ್ಲಿ ಆದಿತ್ಯನಾಮಕ ಪರಮಾತ್ಮ ಆ ರೇತಸ್ಸಿನಲ್ಲಿ ಪುರುಷ ನಾಮಕ ಪರಮಾತ್ಮ ಇದ್ದ ಪ್ರಯುಕ್ತ ಸರ್ವದಾ ರೇತಸ್ಸಿಗೆ ಪೂಂಸ್ತ್ವ ತತ್ಕಾರಣ ಪುರುಷಸಂಬಂಧಕ್ಕೆ ಸ್ತ್ರೀಯಳು ವಿಮುಖಳಾಗಬಾರದು. ಹಾಗೆ ಸ್ತ್ರೀರಕ್ತಕ್ಕೆ ಅಗ್ನಿ ಅಭಿಮಾನಿ ಆತನಲ್ಲಿ ಯಜ್ಞನಾಮಕ ಪರಮಾತ್ಮ ಸ್ತ್ರೀ ರೂಪದಲ್ಲಿ ಇದ್ದಾನೆ. ತತ್ಕಾರಣ ಋತುಕಾಲದಲ್ಲಿ ಪುರುಷ ಸ್ತ್ರೀಗೆ ವಿಮುಖನಾಗಬಾರದು. ಪುರುಷ ಸ್ತ್ರೀ ಸಂಬಂಧದ್ವಾರಾ ಪುರುಷನಲ್ಲಿ ಇದ್ದಂಥಾ ಪರಮಾತ್ಮ ತಾನು ವೊಂದು ಅಂಶ ಮುಂದೆ ಹುಟ್ಟೋ ಜೀವನ ಶರೀರಕ್ಕ ಪರಿಮಿತನಾಗಥಾನೆ. ಹೀಗೆ ಪರಮಾತ್ಮನ ಸಂಬಂಧದಿಂದ ಪುಣ್ಯಗಳು ಹಿರೇರ ಸುಖಕ್ಕೆ ಕಾರಣವಾಗುತ್ತವೆ. ಪರಮಾತ್ಮ ಅಂಶದಲ್ಲಿ ಉಂಟಾದ ಕಾರಣ ಇವನ ಕೆಲವ ಅಂಶತ್ವದಿಂದ ಪರಂಪರಾ ಅವತಾರ ಧರಿಸದೇ ಹೋದರೆ ಮೂಲ ಪುರುಷನ ಸಂತತಿ ಎಂಬೋ ವ್ಯವಹಾರ ಕೂಡದು. ತತ್ಕಾರಣ ಬ್ರಹ್ಮಗೆ ಪ್ರತಿಬಿಂಬ ರುದ್ರ, ರುದ್ರಗೆ ಪ್ರತಿಬಿಂಬ ಇಂದ್ರನೆಂಬೋ ವ್ಯವಹಾರ ವುಂಟು. ತತ್ಕಾರಣ ಬ್ರಹ್ಮಗೆ ತತ್ಪತ್ನೀಯರಿಗೆ ಪ್ರತಿಬಿಂಬ ತಿಳಯಬೇಕು. ಪಾಯುದಲ್ಲಿ ಮಿತ್ರನಾಮಕ ಸೂರ್ಯ, ಅಪಾನನಾಮಕ ವಾಯು ಅಭಿಮಾನಿಗಳು ಇಲ್ಲಿ ಪ್ರದ್ಯುಮ್ನನಾಮಕ ಪರಮಾತ್ಮ ಬಲಗಾಲಲ್ಲಿ ಗರುಡ ಶೇಷರು. ಸಂಧಿಗಳಲ್ಲಿ ೫ ಭಗವದ್ರೂಪ ಗಳು. ೧ ಟಂಕಿ ೨ ಶರಕ ೩ ಡರಕ ೪ ಧರಿಣಿ ೫ ಣನ್ಯು ಈ ರೂಪ ದಿಂದ ಇದ್ದಾನೆ. ಎಡಗಡೆ ಕಾಲಿನಲ್ಲಿ ಇಂದ್ರ, ಸಂಧಿಗಳಲ್ಲಿ ೫ ಭಗವ ದ್ರೂಪಗಳು ೧ ತಾರಾ ೨ ಥಪತಿ ೩ ದಂಡಿ ೪ ಧನ್ವಿ ೫ ನಮ್ಯು ಈ ಐದು ಭಗವದ್ರೂಪಗಳು. ಪಾದಾಭಿಮಾನಿ ಜಯಂತ ಆತನಲ್ಲಿ ಯಜ್ಞ ನಾಮಕ ಪರಮಾತ್ಮ (ಬಲಪಾದದಲ್ಲಿ ಜಯಂತ ಎಡಪಾದದಲ್ಲಿ ಶಂಭು) ಉಪೇಂದ್ರ ಎಂತ ಇದ್ದಾನೆ. ಬಲಗಾಲ ಹೆಬ್ಬೊಟ್ಟಿನಲ್ಲಿ ವಾಯುದೇವರ ಅಧಿಷ್ಠಾನವದೆ. ಅಲ್ಲಿ ತೀರ್ಥಪಾದ ನಾರಾಯಣನು ದೇಹಧಾರಕನಾಗಿ

ದ್ಧಾನೆ. ಅಲ್ಲಿ ಪರಮಾತ್ಮನ ಆಜ್ಞೆಯಿಂದ ಸಮಸ್ತ ತೀರ್ಥಗಳು ವಾಸ ಮಾಡಿರುತ್ತವೆ. ತತ್ಕಾರಣ ಬ್ರಾಹ್ಮಣರ ಪಾದಪ್ರಕ್ಷಾಲನೋದಕ ಅತಿ ಪವಿತ್ರವೆಂದು ಪರಮಾತ್ಮನು ಧರ್ಮರಾಯಗೆ ಸರ್ವತೀರ್ಥ ಸ್ನಾನ ಮಾಡೋ ಇಚ್ಛೆ ಅದೆಂದರೆ ಬ್ರಾಹ್ಮರ ಪಾದೋದಕ ಶಿರಸಾ ಧರಿಸೆಂದು ಹೇಳಿದ್ಧಾನೆ. ಅಲ್ಲಿ ಪರಮಾತ್ಮನು ೧ ವಾಕ್, ೨ ಪಾಣಿಪಾದ, ೩ ತ್ವಕು. ೪ ನೇತ್ರ, (೫ ಶ್ರೋತ್ರ) ೬ ಹೃದಯಸ್ಥಾನ, ಹೀಗೆ೬ ರಲ್ಲಿ ರಮಾದೇವೇರು ಆಕಾಶರೂಪದಿಂದ ವ್ಯಾಪ್ತರಾಗಿದ್ಧಾರೆ. ಅಲ್ಲಿ ಪರಮಾತ್ಮನು ಆರು ರೂಪದಿಂದ ಇದ್ದು ಇಂದ್ರಿಯಗಳ ವ್ಯಾಪಾರ ಮಾಡಿಸುಥಾನೆ. ೧ ವಾಕ್ಯ ದಲ್ಲಿ ಪ್ರಾಜ್ಞನಾಮಕ ಪರಮಾತ್ಮ ಇದ್ಧಾನೆ. ೨ ಪಾಣಿಯಲ್ಲಿ ಪ್ರಿಯನಾ ಮಕ ಪರಮಾತ್ಮ, ೩ ಪಾದದಲ್ಲಿ ಸತ್ವ(ತ್ಯ)ನಾಮಕ ಪರಮಾತ್ಮ, ೫ ನೇತ್ರ ದಲ್ಲಿ ಆನಂದ, ೬ ಹೃದಯದಲ್ಲಿ ಸ್ಥಿತಿ ನಾಮಕ ಪರಮಾತ್ಮ ಈ ಪ್ರಕಾರ ೬ ಭಗವದ್ರೂಪಗಳ ತಿಳಿದು ಸರ್ವದಾ ಈ ರೂಪಗಳ ಧ್ಯಾನಮಾಡಿದರೆ, ಕಾಮಕ್ರೋಧಗಳು ಗೆಲುಥಾನೆ.

ಪ್ರಮಾಣ ಮಾನಸಸ್ಮೃತಿ:—

ವಾಕ್ ಪ್ರಾಣ ದೃಕ್ ಶ್ರೋತ್ರ ಮನೋಹೃದಯಸ್ಥಾನಗೇಷುಚ ||
ಆಕಾಶಾಖ್ಯ ರಮಾರೂಪೇಷ್ವೇವಂ ರೂಪಾಣಿ ಚಿಂತಯೇತ್ ||
ವಿಷ್ಣೋಃಪ್ರಾಜ್ಞ ಪ್ರಿಯ ಸತ್ಯಾನಂತಾನಂದಾಸ್ಥಿತಿಃ |
ಕ್ರಮಾಏತತ್ ಷಡ್ರೂಪ ವಿಜ್ಞಾನೀ ಷಡರೀನ್ ಸಂಜಯಿಷ್ಯತಿ || ೧೦೫ ||

ಹೃದಯಾಕಾಶದಲ್ಲಿ ಅನಿರುದ್ಧ ಪುರುಷನಾಮಕ ವ್ಯಾಪ್ತ, ತಾಲು ದೇಶದಲ್ಲಿ ಪ್ರದ್ಯುಮ್ನ ನಾಮಕ ಪರಮಾತ್ಮ ಇಂದ್ರಯೋನಿ ಹೆಸರಿಲಿ ಇದ್ದಾನೆ. ಶಿರನಾಂತ ಕೇಶಮೂಲದಲ್ಲಿ ಸಂಕರುಷಣ ನಾಮಕ ಪರಮಾತ್ಮ ವೀತ ಎಂಬೋ ಹೆಸರ್ಲೆ ಇದ್ದಾನೆ. ಶಿರೋಧ್ರ್ವದಲ್ಲಿ ವಾಸುದೇವ ಅವ್ಯಯ ನಾಗಿದ್ಧಾನೆ. ಹೃದಯ ಸಂಸ್ಥಿತನಾಗಿ ವಾಮನ ನಾಮಕ ಪರಮಾತ್ಮ ಸರ್ವದಾ ದೇವತೆಗಳಿಂದ ಉಪಾಸ್ಯನಾಗಿ ಪ್ರಾಣೋಪಾನಾದಿ ಚೇಷ್ಟಕ ನಾಗಿದ್ದಾನೆ. ಗಾಯತ್ರೀ ಶಬ್ದವಾಚ್ಯ್ಯ ಪರಮಾತ್ಮ ಸರ್ವಥಾ ಗಾಯ ತ್ರ್ಯಂತರ್ಗತನಾಗಿ ಹೃದಯದಲ್ಲಿದ್ದಾನೆ. ತನ್ನ ಉದ್ದಿಶ್ಯ ಗಾಯನ ಮಾಡಿ ದವರ ರಕ್ಷಿಸುತ್ತಾನಾದಕಾರಣ ಗಾಯತ್ರೀಯೆಂದು ಕರಸುಥಾನೆ. ಸಕಲ

ಕ್ರಿಯವೂ ಸರ್ವ ಜನರೂ ಈತನ ಉದ್ದಿಶ್ಯ ಈತನ ಪ್ರೀತ್ಯರ್ಥವಾಗಿ ಮಾಡಿ ಯಜ್ಞತ್ವೇನ ಸಮರ್ಪಣ ಮಾಡಬೇಕು. ಗಾಯತ್ರೀವಾಚ್ಯ ಪರಮಾತ್ಮನೇ ಹೃದಯದಲ್ಲಿ ಪ್ರಾಣಎಂದು ಕರಸಥಾನೆ. ಈ ಪರಮಾತ್ಮ ಸೂರ್ಯಾಂತರ್ಗತನಾಗಿ, ಪ್ರಾಣಾಂತರ್ಯಾಮಿಯಾಗಿ, ಸೂರ್ಯ ಪ್ರಾಣರಿಂದ ಉಪಾಸ್ಯ, ಸೂರ್ಯಗೆ ಪ್ರಾಣದ್ವಾರ ಉಪಾಸ್ಯ, ಜನರಿಗೆ ಸೂರ್ಯ ದ್ವಾರಾಂತರ್ಗತ ಪ್ರಾಣದ್ವಾರಾ ಉಪಾಸ್ಯ. ತತ್ಕಾರಣ ಈ ಪರ ಮಾತ್ಮ ಸೂರ್ಯ ಪ್ರಾಣ ರೂಪದಿಂದ ಇದ್ಧಾನೆಂದು ಕರಸುಥಾನೆ.

ಹಾಗೆ ಶರೀರದಲ್ಲಿ ಪ್ರಾಣಾಗ್ನಿಗಳು ಇವೆ. ಅಲ್ಲಿ ಅಗ್ನ್ಯಂತರ್ಗತ ಪರಮಾತ್ಮಗೆ ಅಗ್ನಿಶಬ್ದ ವಾಚ್ಯತ್ವ ಪ್ರಸಿದ್ಧವಾಗಿದೆ. ವೈಶ್ವಾನರಾಧಿಕರಣ ದಲ್ಲಿ ಪರಮಾತ್ಮಗೆ ಅಗ್ನಿ ಶಬ್ದ ವಾಚಕತ್ವ ಹೀಗೆ ಜನರು ತಿಳಿದು ದಾವ ದಾವ ಪದಾರ್ಥ ಅಹರ ಉದ್ದಿಶ್ಯ ತುತ್ತು ತೆಗೆದುಕೊಂಡ ಕಾಲಕ್ಕೂ ಸರಿಯೆ. ಅದು ತಿಳಿದು ಅಗ್ನ್ಯಂತರ್ಗತ ಪ್ರಾಣಾಂತರ್ಯಾಮಿ ಹರಿ ಣಾಂತರ್ಯಾಮಿಗೆ ಆಹುತಿಯೆಂದು ತಿಳಿಯೋಣ. ಅಶ್ವಮೇಧ ಯಜ್ಞ ಮಾಡಿದ ಫಲ ಬರುತಿದ್ದಕಾರಣ ಅಗತ್ಯ ಇದರ ವಿಸ್ತಾರ ತಿಳಿದು ತಾನು ಭೋಜನಮಾಡಿದ್ದೆಲ್ಲಾ ಪರಮಾತ್ಮಗೆ ಯಜ್ಞತ್ವೇನ ಸಮರ್ಪಣ ಮಾಡ ಬೇಕು. ಬಾಹ್ಯ ಪರಮಾತ್ಮನ ಮೂರ್ತಿಯಲ್ಲಿ ತನ್ನ ಅಂತಸ್ಥ ಪರಮಾ ತ್ಮನ್ನ ಆವಾಹನಮಾಡಿ, ಪದಾರ್ಥಗಳ ಅರ್ಪಿಸಿ, ಅದೆ ಪರಮಾತ್ಮಗೆ ಹೃದಯದಲ್ಲಿ ತಿಳಿದು ಪರಮಾತ್ಮಗೆ ಅರ್ಪಿಸುತ ಭೋಜನ ಮಾಡಿದಫಲ "ನೈವೇದ್ಯ ಶೇಷಂ ದೇವಸ್ಯ ಯೋ ಭುಂಕ್ತೇಚ ದಿನೆದಿನೇ ॥ ಶಿಕ್ಥೇಶಿಕ್ಥೇ ಭವೇತ್ಪುಣ್ಯಂ ಚಾಂದ್ರಾಯಣ ಶತಾಧಿಕಂ ॥ ೧ ॥ ಕವಳೇ ಕವಳೇಯಸ್ಯ ಗೋವಿಂದಸ್ಯಾನುಕೀರ್ತನಂ । ಜೀವನ್ಮುಕ್ತೋ ಯಥಾಕುರ್ವನ್ ಕೇವ ಲೋದರ ಪೂರಣಂ ॥ ೨ ॥ ಅನರ್ಪಿಯಿತ್ವಾ ಗೋವಿಂದೇಯೋ ಭುಂಕ್ತೇ ಮಾನವಾಧಮಾಃ ॥ ಶ್ವಾನವಿಷ್ಟಾಸಮಂ ಚಾನ್ನಂ ನೀರಂಚ ಸುರಯಾ ಸಮಂ ॥ ೩ ॥ ಹೀಗಿದ್ದ ಪ್ರಯುಕ್ತ ಅರ್ಪಣೆ ಪ್ರಕಾರ ಹರಿ ಗುರುಗಳು ಪ್ರೇರಿಸಿದ ಪ್ರಕಾರ ಬರೋಣವಾಗತದೆ. ಮುಖದಲ್ಲಿ ಆಹವನೀಯ ಅಗ್ನಿ ಇದ್ಧಾನೆ. ಆತನಲ್ಲಿ ಹೃದ್ಗತನಾದ ಪ್ರಾಣಾಂತರ್ಗತ ಅಗ್ನಿನಾಮಕ ಪರ

ಪಾತ್ಮ ಈ ಪರಮಾತ್ಮಗೆ ಪ್ರತಿಬಿಂಬರು ಪೂರ್ವದ್ವಾರ ಪಾಲಕರು, ಪ್ರಾಣಭಾಸ್ಕರನು. ಇವರಂತರ್ಗತ ಪರಮಾತ್ಮಗೆ ತುತ್ತು ಆಹುತಿ ಕೊಟ್ಟರೆ ಯಜ್ಞತ್ರೀಸ ಫಲ ಬರುತ್ತದೆ. ಪ್ರಾಣಾಂತರ್ಯಾಮಿ ಅನಿರುದ್ಧ ನಾಮಕ ವೈಶ್ವಾನರ ಪರಮಾತ್ಮಗೆ ಆಹುತಿಯೆಂದು ಸ್ಮರಿಸಿದರೆ ಇದೇ ಸಮರ್ಪಣ. ಇದರಿಂದಲ್ಲೇ ಪುರುಷಾರ್ಥ. ಇದರಿಂದಲ್ಲೇ ಪರಮಾತ್ಮ ತುಷ್ಟನಾಗಥಾನೆ. ನಾಭಿಯಲ್ಲಿ ದಕ್ಷಣಾಗ್ನಿಯಲ್ಲಿ ವ್ಯಾನಾಂತರ್ಯಾಮಿ ಅಗ್ನಿನಾಮಕ ಪರಮಾತ್ಮ ಈ ಪರಮಾತ್ಮನೆ ಚಂದ್ರಾಂತರ್ಗತ ವ್ಯಾನ ನಾಮ ವಾಚ್ಯ್ಯಂತರ್ಯಾಮಿ ಈತ ದಕ್ಷಣದ್ವಾರಸ್ಥ ಹೃದ್ಗತ ಪರಮಾತ್ಮಗೆ ಈ ಅಗ್ನಿಚಂದ್ರಾಂತರ್ಗತ ವ್ಯಾನಾಂತರ್ಗತ ಪ್ರದ್ಯುಮ್ನ ನಾಮಕ ಪರಮಾತ್ಮನ್ನ ಸ್ಮರಿಸಿ, ಆಹುತಿಕೊಟ್ಟರೆ ಪ್ರದ್ಯುಮ್ನ ವೈಶ್ವಾನರ ಪರಮಾತ್ಮ ತುಷ್ಟನಾಗುಥಾನೆ. ಮುಖದಲ್ಲಿದ್ದ ಆಹುತಿ ಅಗ್ನಿಗೆ ಹೃದಯದಲ್ಲಿದ್ದ ಪ್ರಾಣಹೋತೃನಾಭಿಯಲ್ಲಿದ್ದ ದಕ್ಷಣಾಗ್ನಿಯಲ್ಲಿದ್ದ ಪರಮಾತ್ಮಗೆ ನಿಶಾಕರ ನಾಮಕ ವ್ಯಾನ ಬ್ರಹ್ಮ ಸರ್ವ ಶರೀರಗತ. ತರುವಾಯ ಹೃದಯದಲ್ಲಿ ಗಾರ್ಹಸ್ಪತ್ಯಾಗ್ನಿ ಅದೆ. ಈ ಅಗ್ನಿಗತ ಪರಮಾತ್ಮಗೆ ವಾಯುಸ್ಥನಾದ ಅಪಾನನಾಮಕ ಪ್ರಾಣ ಉದ್ಗಾತ್ರನಾಗಿ ಪ್ರತೀಚಿ ದ್ವಾರಸ್ಥನಾಗಿ ಯಜ್ಞ ಮಾಡುತ್ತಾನೆ. ಜನರು ಇದು ತಿಳಿದು ಪಶ್ಚಿಮ ದ್ವಾರಸ್ಥನಾದ ಅಪಾನನಾಮಕ ಪ್ರಾಣದ್ವಾರಾ ಆಹುತಿ ಕೊಟ್ಟರೆ ಅಪಾನನಿಂದ ಪೂಜಿ ಮಾಡಿಸಿಕೊಳ್ಳಲ್ಪಟ್ಟಂಥಾ ಅಫಾನನಾಮಕನಾದ ಸಂಕರಷಣ ನಾಮಕ ವೈಶ್ವಾನರ ಪರಮಾತ್ಮ ಹೃದಯದಲ್ಲಿ ತುಷ್ಟನಾಗುತ್ತಾನೆ. ನಾಭಿ ಉತ್ತರ ವಾಮ ಭಾಗದಲ್ಲಿ ಅವಸಭ್ಯಾಗ್ನಿ ಅದೆ. ಇದಕ್ಕೆ ನಾಭಿಯಲ್ಲಿದ್ದ ಸಮಾನ ನಾಮಕಪ್ರಾಣ, ಅವಸಭ್ಯಾಗ್ನಿ ಗತ ವಾಸುದೇವ ನಾಮಕ ವೈಶ್ವಾನರ ಪರಮಾತ್ಮನ ಯಜಮಾನನಾಗಿ ಆರಾಧಿಸುವ ಜನರು ಈ ಸಮಾನನ ದ್ವಾರಾ ಆಹುತಿಕೊಟ್ಟರೆ, ವಾಸುದೇವ ನಾಮಕ ವೈಶ್ವಾನರನು ತುಷ್ಟ ನಾಗುತ್ತಾನೆ. ನಾಭಿ ದಕ್ಷಣದಲ್ಲಿ ಸಭ್ಯಾಗ್ನಿಯಲ್ಲಿ ಅಧ್ವರ್ಯು ಉದಾನ ನಾಮಕ ವಾಯು ಈತ ಪಂಚಾಗ್ನಿಯಲ್ಲಿ ತನ್ನಾಮದಿಂದ ಇದ್ದಾನೆ

**ಹೃದಿಪ್ರಾಣೋ ಗುದೇಽಪಾನೋ ಸಮಾನೋನಾಭಿಸಂಸ್ಥಿತಃ**

**ಉದಾನಃ ಕಂಠದೇಶಸ್ತು ವ್ಯಾನಃ ಸರ್ವ ಶರೀರಗಃ ||**

ಅಲ್ಲಿ ರಮಾವಿಷ್ಟಾಕಾಶ ನಾಮಕ ನಾರಾಯಣ ಆರಾಧಿಸಿಕೊಳಥಾನೆ. ಜನರು ಇದನ್ನು ತಿಳಿದು ಇವರನ್ನು ಅರ್ಚಿಸಿ, ಉದರಕ್ಕೆ ಮುಖಾಗ್ನಿದ್ವಾರ ಆಹುತಿ ಕೊಟ್ಟರೆ ಶ್ರೀ ನಾರಾಯಣ ನಾಮಕ ಪರಮಾತ್ಮ ತುಷ್ಟನಾಗಿ ಉಂಡಂಥಾ ಪಾಪ ಹತ್ತಗೊಡದೇ ತಾನು ತುಷ್ಟನಾಗಿ ಮೋಕ್ಷಕ್ಕೆ ಉಪ ಯೋಗಿಯಾದ ಸಂಪತ್ತು ಕೊಡುಥಾನೆ " ಕರ್ಮಣಾ ಜ್ಞಾನಮಾಪ್ನೋತಿ " ಎಂಬೋ ನ್ಯಾಯದಿಂದ ಹೊಟ್ಟೆಗೆ ಭೋಜನ ಮಾಡಿದರೆ ಸತ್ಕರ್ಮ ಹ್ಯಾಗಾದೀತೆಂದರೆ--

ಪಾವನಂ ವಿಷ್ಣುನೈವೇದ್ಯಂ ಸುಭೋಜ್ಯಂ ಋಷಿಭಿಸ್ಮೃತಂ ||
ಅನ್ಯದೇವಸ್ಯ ನೈವೇದ್ಯಂ ಭುಕ್ತ್ವಾ ಚಾಂದ್ರಾಯಣಂಚರೇತ್ ||

ತತ್ಕಾರಣ ತನಗೆ ಬೇಕಾದದ್ದು ಪರಮಾತ್ಮಗೆ ಪಂಚಪ್ರಾಣದ್ವಾರಾ ಆಹುತಿ ಯನ್ನು ಕೊಟ್ಟರೆ ಅಶ್ವಮೇಧ ಯಜ್ಞ ಫಲ ಬರುತ್ತದೆ. ಈ ಯಜ್ಞನಿಮಿತ್ತ ಪಂಚಪ್ರಾಣರು ಸರ್ವದಾ ಜಾಗರೂಕದಲ್ಲಿರಥಾರೆ. ಇವ ಇವರನ್ನ ಮರೆತು ತಾನೇ ಭೋಜನ ಮಾಡಥೀನೆಂದು ತಿಳಿದು ಪರಮಾತ್ಮಗೆ ಪೂಜೆಯನ್ನದೇ ಹೋದರೆ ವ್ಯರ್ಥ. ಸಕಲ ಜಗತ್ತು ಮುಖ್ಯ ಪ್ರಾಣರ ಶಿಷ್ಯರು. ಅಗ್ರ್ಯೋ ದಕ ಪುಷ್ಪಾದಿಗಳು ಪರಮಾತ್ಮಗೆ ಬೇಕಾದಂಥಾದ್ದು ಶಿಷ್ಯ ತಾನೆ ಮುಡ ಕೊಂಡರೆ ಗುರುವಿಗೆ ಕೋಪಬಂದೋಪಾದೆಯಲ್ಲಿ ಮುಖ್ಯ ಪ್ರಾಣದೇವ ರಿಂದ ಸರ್ವರು ಕೋಪಕ್ಕೆ ಪಾತ್ರರಾಗುಥಾರೆ. ಮುಖದಿಂದ ಉಚ್ಛಿಷ್ಟ ವಾಯಿತಲ್ಲಾ ಎಂದರೆ ಅದು ಉಚ್ಛಿಷ್ಟವಾಗೋದಿಲ್ಲ. ಕೈಯ್ಯೋಪಾದಿಯಲ್ಲಿ ಅದು ವೊಂದು ಇಂದ್ರಿಯವಾದ ಪ್ರಯುಕ್ತ ಲೋಕದಲ್ಲಿ ಮುಖ ಸಂಬಂಧ ದಿಂದ ಉಚ್ಛಿಷ್ಟವೇನಕಾರಣವೆಂದರೆ ಆತ್ಮಭೋಗಾರ್ಥ ಅಪೇಕ್ಷದಿಂದಲೇ ಉಚ್ಛಿಷ್ಟ. ಇವ ಅದು ಬಿಟ್ಟು ಪೂಜಾರ್ಥ ಕಲ್ಪಿಸಿದರೆ ಅದು ಮಿಾಸಲ ವಾಗಿರುತ್ತದೆ. ಮುಖ್ಯಪ್ರಾಣ ಇದು ತಿಳಿದು ಅವನ ಸುಕೃತ ಅಕ್ಷಯ ಮಾಡಥಾನೆ. ಕದಾಪಿ ಭೋಗಾರ್ಥ ಮಾಡಿಕೊಂಡರೆ ಉಚ್ಛಿಷ್ಟವಾಯಿ ತೆಂದು ಇವನನ್ನ ನರಕಕ್ಕೆ ಹಾಕುಥಾನೆ. ತತ್ಕಾರಣ ಜ್ಞಾನಿಗಳು ಕೇವಲ ಚಿಕ್ಕವರಂತೆ ತಿಳಿದು ಪರಮಾತ್ಮನ ಪೂಜಾರ್ಥವಾಗಿ ಮುಖದಿಂದ ಭಕ್ಷಿಸ ಬೇಕೆಂದು ಭಕ್ಷಿಸುತ್ತಾರೆ. ಭಕ್ಷಿಸೋ ವ್ಯಾಳ್ಯದಲ್ಲಿ ಪರಮಾತ್ಮನ ಸ್ವರೂಪ ರಸ, ರಮಾರಸ, ಪ್ರಾಣರಸ, ಭಾರತೀರಸ, ಶೇಷದೇವತೆಗಳರಸ ಇದ್ದ

ವರ ದೇಹಗಳಲ್ಲಿ ತತ್ವಗಳಲ್ಲಿ ಸ್ವರೂಪದಲ್ಲಿ ಪರಮಾತ್ಮನೇ ಸೇವಿಸಿ, ಜೀವರ ರಕ್ಷಿಸುಥಾನೆ ಇಲ್ಲವೇ ನರಕವಾಗುತದೆ. ಇಲ್ಲಿ ಪರಮಾತ್ಮನೇ ಭೋಜನ ಮಾಡಥಾನೆಂದು ತಿಳಿದರೆ ಯಜ್ಞವಾಗುತದೆ ಎಂಬಲ್ಲಿ ಪ್ರಮಾಣ

ಶ್ರೋತ್ರಂ ಚಕ್ಷುಸ್ಪರ್ಶನಂಚ ರಸನಂ ಘ್ರಾಣಮೇವಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೆ ॥ ೧ ॥

ಅಹಂ ವೈಶ್ವಾನರೋಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ
ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥ ೨ ॥

ಈ ಪ್ರಮಾಣ ಇದ್ದ ಪ್ರಯುಕ್ತ ಪೂಜಾತ್ವೇನ ಸಮರ್ಪಣ ಮಾಡ ತಕ್ಕದ್ದು. ಪರಮಾತ್ಮನೇ ತೃಪ್ತಿ ಕೊಡಥಾನೆ. ಪರಮಾತ್ಮನೇ ರುಚಿ ತಿಳ ಸಥಾನೆ, ಪರಮಾತ್ಮನೇ ತದ್ವಾರಾ ಶರೀರಕ್ಕ ಬಲಕೂಡಥಾನೆ ಹೀಗೆ ತಿಳಿದರೆ ಇದೇ ಕ್ರಿಯಯಿಂದ ಮೋಕ್ಷ ಕೊಡಥಾನೆ. ಕೆಲವರು ಇದರ ವಿಸ್ತಾರ ತಿಳಿಯೋಣವಿದ್ದರೆ ಪ್ರಾಣಾಗ್ನಿ ಖಂಡದಲ್ಲಿ ತಿಳಿಯತಕ್ಕದ್ದು. ಜಠರಾಗ್ನಿಗತನಾದ ಅಗ್ನಿನಾಮಕ ವೈಶ್ವಾನರ ನಾಮಕ ಪರಮಾತ್ಮನನ್ನು ವಾಯುದೇವರು ಸರ್ವದಾ ಘೋಷರೂಪದಿಂದ ಸ್ತೋತ್ರ ಮಾಡತಾರೆ. ಈಗ್ಯೂ ಜನರು ತಮ್ಮ ಕಿವಿ ಮುಚ್ಚಿಕೊಂಡರೆ ಲೋಕಕ್ಕೆ ಮಂಗಳಕರ ವಾದ ಶಬ್ದ ಕೇಳಲ್ಪಡತದೆ. ಏಂದಿಗೆ ಆ ಶಬ್ದ ಕೇಳದೆ ಹೋದರೆ ದೇಹ ದಿಂದ ಮರಣ ಆಗಲ್ಪಡತದೆ. ಇದು ದಾವಾತ ತಿಳಿದು ಮುಖ್ಯ ಪ್ರಾಣಗೆ ಅನುಸಾರಿಯಾದರೆ ಅವನಿಂದ ಸರ್ವದಾ ಪೂಜಿ ಪರಮಾತ್ಮ ಮಾಡಿಸಿ ಕೊಂಡವನಾಗಥಾನೆ.

## ದೇಹವೇ ರಥ

ಈ ದೇಹ ಪರಮಾತ್ಮಗೆ ರಥವಾಗಿ ಅದೆ. ಈ ದೇಹಾಖ್ಯ ರಥಕ್ಕೆ ನಾಲ್ಕು ಕುದರಿ ಅವೆ. ಸೂರ್ಯನು ಸೂರ್ಯನ ಹೆಂಡತಿ ಕಣ್ಣಿನಲ್ಲಿ ಕುದುರೆಯಾಗಿದ್ದಾರೆ. ಚಂದ್ರನು ಈತನ ಹೆಂಡತಿ ಎರಡು ಕಿವಿಗಳಲ್ಲಿ ಕುದುರೆಯಾಗಿದ್ದಾರೆ. ಈ ನಾಲ್ಕು ಕುದರಿಗೆಲ್ಲ ಹಗ್ಗ ವಾಕ್ಯದಲ್ಲಿ ಉಮಾ ದೇವೇರು, ಅಲ್ಲಿ ಉಮಾಪತಿ ರುದ್ರದೇವರು ಮನಸ್ಸಿನಲ್ಲಿದ್ದು, ಸಾರಥಿ

ಯಾಗಿ ಹಗ್ಗಾ ಹಿಡಿಧಾನೆ. ಆ ರಥದಲ್ಲಿ ಮುಖ್ಯ ಪ್ರಾಣಾಂತರ್ಯಾಮಿ ಯಾದ ವಿಷ್ಣುನಾಮಕ ಪರಮಾತ್ಮ ಹೃತ್ಪದ್ಮದಲ್ಲಿ ವಾಸವಾಗಿ ಕುಳಧಾನೆ ತತ್ಕಾರಣ ದೇಹ ಪರಮಾತ್ಮನ ರಥವೆಂದು ಅಲಂಕಾರ ಮಾಡಬೇಕು.

## ನಾಡಿ ಪ್ರಕರಣ

ಏತಾದ್ರುಶ ದೇಹಕ್ಕ ವೃಷಣಾಸನ ಮಧ್ಯದಲ್ಲಿ ಒಂದು ಗಡ್ಡಿ ಅದೆ. ಅದು ವರ್ತುಳವಾಗಿ ಚತುರಂಗುಲ (ದಳ) ವಿಸ್ತಾರವಾಗಿ ಎರಡಂಗುಲಿ ನಿಲವಾಗಿ ಸರ್ವದಾ ದೇಹಾಧಾರವಾದ ಎಪ್ಪತ್ತೆರಡು ಸಾವಿರದ ನೂರಾ ವೊಂದು ನಾಡಿಗಳಿಗೆ ಭೂಮಿ ಸ್ಥಾನಾಪನ್ನವಾದ ಪ್ರಯುಕ್ತ ಈ ಗಡ್ಡಿ ಮೂಲಾಧಾರವೆಂದು ಕರಸುತ್ತದೆ. ಕೆಲವ ಪಕ್ಷದಲ್ಲಿ ಎಪ್ಪತ್ತೆರಡು ಸಾವಿರ ನಾಡಿ ಮೇಲೆ ಇಲ್ಲವೆಂದು ಹೇಳಧಾರೆ. ದೇವಗುಹ್ಯ ನಾವು ಕಂಡಿಲ್ಲ. ಸಿರ್ಧಾರ ಮಾಡಲಿಕ್ಕ ಗುರುಗಳು ವ್ಯಾಲಿ ನೂರಾವಂದು ಎಂದು ಸುಳಾದಿ ಯಲ್ಲಿ ಬರೆದ ಪ್ರಯುಕ್ತ ಬಿಂಬರ ಮಾತು ಪ್ರತಿಬಿಂಬರಿಗೆ ಪ್ರಮಾಣವಾದ ಪ್ರಯುಕ್ತ ವ್ಯಾಲಿ ನೂರಾವಂದು ಹೀಗೆ ಹೇಳಲ್ಪಡತದೆ.

## ಸುಷುಮ್ನಾನಾಡಿ ಪ್ರಕರ್ಣ

ಈ ನಾಡಿಗಳ ಮಧ್ಯದಲ್ಲಿ ಕೇವಲ ಸುಷುಮ್ನನಾಡಿ ಮಧ್ಯನಾಡಿ ಇದಕ್ಕೆ ಬ್ರಹ್ಮನಾಡಿ ಎಂಬೋ ಹೆಸರು. ಈ ನಾಡೀ ಮೂಲಾಧಾರದಿಂದ ಬ್ರಹ್ಮರಂಧ್ರ ಪರಿಯಂತರವೂ ಅತಿ ಋಜುವಾಗಿ ಅದೆ. ಈ ನಾಡಿಮಧ್ಯ ದಲ್ಲಿ ವೇಣುವಿನೋಪಾದೆಯಲ್ಲಿ ಛಿದ್ರವುಳ್ಳದ್ದಾಗಿದೆ. ಈ ನಾಡಿ ಅಂಶ ದಿಂದ ಯುಕ್ತವಾಗಿ ಅದೆ. ಸುಷುಮ್ನಾ ಪೂರ್ವನಾಡಿ **ಪ್ರಕಾಶಿನಿ** ಎಂಬು ವದು ಅಲ್ಲಿ ವಾಸುದೇವನಾಮಕ ಪರಮಾತ್ಮನಿಯಾಮಕ ಶಿತವರ್ಣ ದಕ್ಷ ಣಾಂಶ **ವೈದ್ಯುತ** ಪಿಂಗಳ ಹಸರುವರ್ಣ ಅಲ್ಲಿ ಸಂಕರಷಣನಾಮಕ ಪರ ಮಾತ್ಮ ನಿಯಾಮಕ. ಪೃಷ್ಟಾಂಶದಲ್ಲಿ **ವಜ್ರಕಾನಾಡಿ** ಅಲ್ಲಿ ಪ್ರದ್ಯುಮ್ನ ನಾಮಕ ಪರಮಾತ್ಮ ಹರಿದ್ವರ್ಣ. ವಾಮಾಂಶದಲ್ಲಿ **ಆರ್ಯಕಾನಾಡಿ** ನೀಲವರ್ಣ ಅಲ್ಲಿ ಅನಿರುದ್ಧನಾಮಕ ಪರಮಾತ್ಮ. **ಮಧ್ಯನಾಡಿ ಬ್ರಹ್ಮ** ನಾಡೀಯೆಂದು ಕರೆಸುತ್ತದೆ. ಅಲ್ಲಿ ನಾರಾಯಣ ನಾಮಕ ಪರಮಾತ್ಮ.

ಹೀಗೆ ನಾಲ್ಕು ದಿಕ್ಕಿನಲ್ಲಿ ಕೂಡಿ ಪಂಚಾಂಶವುಳ್ಳದ್ದು ಸುಷುಮ್ನನಾಡಿ ಯೆಂಬು ಕರಸುತ್ತದೆ. ಮಧ್ಯನಾಡಿ ಅರುಣ ವರ್ಣ

**೧ ಸುಷುಮ್ನಾನಾಡಿ ಮೂಲದೇಶ ನಾಲ್ಕುದಿಕ್ಕಿನನಾಡಿ** ಹೀಗೆ ಈ ಮೂಲದೇಶ ಮಧ್ಯನಾಡಿಯಲ್ಲಿ ನಾಲ್ಕುದಳ ಕಮಲ, ನಾಡಿಗೆ ಒಂದೊಂದರಹಾಗೆ ೫ ಕಮಲಗಳು ಅವೆ. ಅಲ್ಲಿಯ ನಾಡಿಗಳಂತೆ ಅನಿರುದ್ಧಾದಿ ಭಗವದ್ರೂಪಗಳಿವೆ. ( ಅ. ಅ. ಅ. ಪ್ರ. ಅ. ಸ. ಅ. ವಾ. ಅ.ನಾ)

೨. ನಾಭಿದೇಶದಲ್ಲಿ ಆರುದಳದ ಕಮಲ ಇಲ್ಲಿ ಪ್ರದ್ಯುಮ್ನಾದಿ ಭಗವದ್ರೂಪಗಳು.

೩. ಹೃದಯಪದ್ಮದಲ್ಲಿ ೮ ದಳದ ಕಮಲಗಳಿವೆ. ಸಂಕರುಷಣಾದಿ ೫ ಭಗವದ್ರೂಪಗಳು. ಬ್ರಹ್ಮನಾಡಿಯಲ್ಲಿದ್ದ ಕಮಲದಲ್ಲಿ ಪ್ರಾಜ್ಞ ನಾಮಕ ಪರಮಾತ್ಮಬಿಂಬನಾಗಿದ್ದಾನೆ. ಮುಂದೆ ನಾಡಿಯಲ್ಲಿದ್ದ ಕ್ರಮ ಹೇಳಲ್ಪಡುತ್ತದೆ.

೪. ಹೃದಯದಮ್ಯಾಲೆ ವೃಕ್ಷಸ್ಥಳ ಬ್ರಹ್ಮನಾಡ್ಯಾದಿಗಳಲ್ಲಿ ಹನ್ನೆರಡ ದಳದ ಕಮಲ ಅಲ್ಲಿ ಒಂದೇ ಕಮಲದಲ್ಲಿ ಪಂಚಾತ್ಮಕ ಭಗವದ್ರೂಪಗಳಿವೆ. ಧ್ಯಾನಮಾಡಿದಿರೆ ರಕ್ಷಿಸುಥಾನೆ.

೫. ಕಂಠದೇಶದಲ್ಲಿ ಷೋಡಶದಳ ಕಮಲಗಳು (೫) ದ್ವಿದಳ ಕಮಲಗಳು ಇಲ್ಲಿ ಐದು ಭಗವದ್ರೂಪಗಳು

೬. ಭ್ರೂಮಧ್ಯದಲ್ಲಿ (ಚತುರ್ದಳ) ದ್ವಿದಳ ಕಮಲಗಳು (೫) ಇಲ್ಲಿ ಐದು ಭಗವದ್ರೂಪಗಳು

೭. ಮೂರ್ಧ್ನಿಯಲ್ಲಿ ( ಸಹಸ್ರದಳ ಕಮಲ) ಶ್ವೇತ ಪತ್ರಾಬ್ಜಗಳು, ಈ ಎಲ್ಲ ಕಮಲಗಳಲ್ಲಿ ಕ್ರಮದಿಂದ ಆನಿರುದ್ಧಾದಿ ಭಗವದ್ರೂಪಗಳು ಇರುಥಾವೆ.

೮. ಶಿರಸ್ಸಿನಮ್ಯಾಲೆ ದ್ವಾದಶಾಂಗುಲಿಮೇಲೆ ಛತ್ರದೋಪಾದೆಯಲ್ಲಿ ಹನ್ನೆರಡ ದಳದ ಕಮಲ ಒಂದೇ ಅದೆ ಅಲ್ಲಿ ವಾಸುದೇವನಾಮಕ ಪರಮಾತ್ಮ ತುರ್ಯ ಎಂಬೋ ಹೆಸರಿನಲ್ಲಿ ಇದ್ದಾನೆ. ಈತನ ವ್ಯಾಪಾರ ಕರ್ಮಸಾಕ್ಷಿಯಾಗಿ ನೋಡಿ ಮೋಕ್ಷ ಕೊಡೋಣ.

ಈ ಪ್ರಕಾರ ಮೂವತ್ತೆರಡು ಕಮಲದಲ್ಲಿದ್ದ ಭಗವದ್ರೂಪಗಳು ಇನ್ನು ಪೂರ್ವೋಕ್ತಪ್ರಕಾರ ಸಮಸ್ತ ಭಗವದ್ರೂಪಗಳು. ಮುಂದೆ ಪರಮಾತ್ಮ ಪ್ರೇರಿಸಿದಷ್ಟು ಹೇಳುವಂಥಾ ರೂಪಗಳು. ಹೃತ್ಪದ್ಮ ಕರ್ಣಿಕಾರಥ ಮಧ್ಯದಲ್ಲಿದ್ದ ಪ್ರಾಜ್ಞನಾಮಕ ಪರಮಾತ್ಮನೊಳಗೆ ಐಕ್ಯಚಿಂತನೆ ಮಾಡಬೇಕು. ಈ ಪರಮಾತ್ಮಗೆ ಕೇವಲ ಪ್ರೀತ್ಯಾಸ್ಪದವಾಗಿದ್ದ ಮನಿ. ಬ್ರಹ್ಮನಾಡಿಯಲ್ಲಿದ್ದ ಕಮಲ ಅಲ್ಲಿಯ ವಿಸ್ತಾರ ಮತ್ತೂ ಹೇಳಲ್ಪಡುತ್ತದೆ. ಉಕ್ತಪ್ರಕಾರ ಭಗವದ್ರೂಪಗಳು ಚಿಂತನೆಮಾಡುವದರಿಂದ ಸಂಸಾರ ಪಾಶದಿಂದ ಮುಕ್ತನಾಗಿ ಮೋಕ್ಷ ಐದಥಾನೆ.

## ಈ ನಾಡಿಗಳಿಗೆ ಅಭಿಮಾನಿ ದೇವತೆಗಳ ವಿವರ

ನಾಡಿಯಲ್ಲಿದ್ದ ಅಭಿಮಾನಿ ದೇವತೆಗಳು ನದಿಗಳು. ಸುಷಮ್ನಾನಾಡಿಯಲ್ಲಿ ಬ್ರಹ್ಮದೇವರು ಆಭಿಮಾನಿ ಸರಸ್ವತಿ ನದಿ ಇಡಾನಾಡಿಯಲ್ಲಿ ಭಾಗೀರಥಿ ನದಿ ಬಲಗಿವಿಗೆಹೋಗಿ ಅದೆ. ಅದಕ್ಕೆ ಚಂದ್ರಅಭಿಮಾನಿ, ಪಿಂಗಳಾನಾಡಿಯಲ್ಲಿ ಸೂರ್ಯಾಭಿಮಾನಿ ಯಮುನಾನದಿ ಅದೆ. ಬ್ರಹ್ಮನಾಡಿಯಲ್ಲಿದ್ದ ೫ ಪರಮಾತ್ಮನ ವರ್ಣಗಳು ವಾಸುದೇವರೂಪ. ಅಮಲ ಸ್ಫಟಿಕದೋಪಾದೆಯಲ್ಲಿ ಕಾಂತಿ. ಸಂಕರುಷಣರೂಪ ಸ್ವರ್ಣದೋಪಾದೆಲಿ ಕಾಂತಿ ( ಪಿಂಗಟ ) ಪ್ರದ್ಯುಮ್ನ ಪೀತವರ್ಣ, ನೀಲವರ್ಣ ಅನಿರುದ್ಧ. ನಾರಾಯಣರೂಪ ತರುಣಾರುಣದೋಪಾದೆಯಲ್ಲಿ, ಇನ್ನು ಬ್ರಹ್ಮನಾಡಿಗತ ಕಮಲವಿಸ್ತಾರ ವೈಭವ ಹೇಳಲ್ಪಡತದೆ. ಮೂಲಾಧಾರದಲ್ಲಿ ನಾಲ್ಕು ದಳದ ಕಮಲ ಪ್ರವಾಳವರ್ಣದೋಪಾದೇಲಿ ಅದೆ. ಇಲ್ಲಿ ಏಳು ಜನ ಮರುತುಗಳು ವಾಸವಾಗಿಹಾರೆ. ನಾಲ್ಕು ದಳಗಳಲ್ಲಿ ನಾಲ್ಕು ದೇವತೆಗಳು ಒಂದೊಂದು ದಳದಲ್ಲಿ ಒಂದೊಂದು ವೇದ ಈ ಪ್ರಕಾರವದೆ. ಅಲ್ಲಿ ಬೃಹಸ್ಪತಿ, ಸೋಮ, ಬುಧ, ಶನ್ಯೇಶ್ಚರ, ನಾಲ್ವರು ಒಂದೊಂದು ದಳದಲ್ಲಿ ಒಬ್ಬೊಬ್ಬರು ವಾಸವಾಗಿ ಪರಮಾತ್ಮನ್ನ ಶೀಲ ಗುಣದಿಂದ ಧ್ಯಾನಮಾಡುಥಾರೆ. ಅನಿರುದ್ಧ ನಾಮಕ ಪರಮಾತ್ಮ ಕಮಲಕ್ಕೆ ನಿಯಾಮಕನು ನೀಲವರ್ಣದಿಂದ ಪಂಚಭಗವದ್ರೂಪಗಳು ಅವೆ. ಕಾಲಚಕ್ರದೋಪಾದೆಯಲ್ಲಿ ಜಡವಾಯು ಊರ್ಧ್ವ ಅಧೋಭಾಗಕ್ಕ ಸಂಚಾರಮಾಡತದೆ.

ಸ್ವಾಯಂಭುವಮನು ಅಭಿಮಾನಿಯಾಗಿ ಅನಿರುದ್ಧನಾಮಕ ಪರಮಾತ್ಮನ ಉಪಾಸನೆ ಮಾಡುಥಾನೆ.

ಹೊಕ್ಕಳಲ್ಲಿ ಆರುದಳದ ಕಮಲ, ರಕ್ತ ನೀಲವರ್ಣ, ಸಪ್ತವಾಯುಗಳ ಅಲ್ಲಿ ವಾಸ, ಒಂದೊಂದು ದಳದಲ್ಲಿ ಪರಮಾತ್ಮ ಆರುಮಂದಿ ಹೆಂಡರು ಇದ್ದಾರೆ. ಈ ಕಮಲಕ್ಕ ಅಭಿಮಾನಿ ಗಣೇಶ ವಿಶ್ವಮೂರ್ತಿ ಆರಾಧನೆ ಮಾಡಥಾನೆ. ಕಮಲಸ್ಥಾನಕ್ಕ ನಿಯಾಮಕ ಪ್ರದ್ಯುಮ್ನಮೂರ್ತಿ ಈ ಹೊಕ್ಕಳಿಂದ ಆಕಾಶವನ್ನು ಪರಮಾತ್ಮ ಹುಟ್ಟಿಸಿದ್ಧಾನೆ.

ಹೃದಯದಲ್ಲಿ ಎಂಟದಳದ ಕಮಲ. ಇದರೊಳಗೆ ಹದಿನಾಲ್ಕು ದಳಾತ್ಮಕವಾದ ಅನಿರುದ್ಧ ಶರೀರವದೆ. ದೀಪದೋಪಾದೆಯಲ್ಲಿ ಪ್ರಕಾಶ ಪರಮಾತ್ಮನ ಪ್ರೇರಣೆಯಿಂದ ಸಮಸ್ತ ದೇಹದಲ್ಲಿ ವ್ಯಾಪ್ತಿ ತನ್ನ ಕರ್ಮದ ಸುಖ ದುಃಖ ಶರೀರದ್ವಾರಾ ಅನುಭವಿಸುವಂಥಾವ, ಈ ಕಮಲದ ಎಂಟು ದಳದಲ್ಲಿ ಅಷ್ಟದಿಕ್ಪಾಲಕರು ಇದ್ಧಾರೆ. ಏಳುಮಂದಿ ಮರುತುಗಳು ಇದ್ಧಾರೆ ಇಲ್ಲಿ ಶಕ್ತ್ಯಾದಿ ಭಗವದ್ರೂಪಗಳು ೧೨, ದಿಗ್ದಳಗಳಲ್ಲಿ ಎರಡೆರಡು ರೂಪಪ್ರಕಾರ (೮) ವಿದಿಗ್ ದಳಗಳಲ್ಲಿ ಒಂದೊಂದು ಭಗವದ್ರೂಪಗಳು ನಾಲ್ಕುಅವೆ. ಈ ಕಮಲದ ವರ್ಣವು ಉದ್ಯದಾದಿತ್ಯನಹಾಗೆ ಈ ಕಮಲಕ್ಕ ನಿಯಾಮಕ ಸಂಕರಷಣರೂಪ. ಇದಕ್ಕೆ ಅಭಿಮಾನಿ ಇಂದ್ರ ಉಪೇಂದ್ರನಾಮಕ ಪರಮಾತ್ಮನ್ನ ಆರಾಧನಾ ಮಾಡುತ್ತಾನೆ. ಇಲ್ಲಿ ಅಂಗುಷ್ಠ ಪ್ರಮಾಣನಾಗಿ ಸಕಲ ಜಗದ್ವ್ಯಾಪ್ತನಾದ ಅಷ್ಟಭುಜ ವಿಷ್ಣು ನಾಮಕ ಪರಮಾತ್ಮನೇ ಸರ್ವೋತ್ತಮನೆಂದು ತಿಳಿಯಬೇಕು. ಇದೇ ಕ್ಷಣದಲ್ಲಿ ಒಂದೊಂದು ದಳಕ್ಕ ಬಂದು ಜೀವರಿಗೆ ಯೋಗ್ಯತಾನುಸಾರ ಬಗೆಬಗೆಯ ಪ್ರೇರಣಾ ಮಾಡಿ, ಜೀವರ ವ್ಯಾಪಾರ ನಡಸುಥಾನೆ ರುದ್ರಾದಿಗಳು ಮೊದಲಾಗಿ ಪರಮಾತ್ಮನ ಪ್ರೇರಣೆ ಮೋಹಿಸದಲೇ ಇರಲಾರರು. ಈ ಕ್ಷಣದಲ್ಲಿ ಮೋಹಿತರಾಗುವ ತೆರ ಮಾಡುವ. ರುದ್ರದೇವರು ಆ ಪರಮಾತ್ಮನ ಶ್ರೀ ರೂಪಕ್ಕೆ ಮೋಹಿಸಿ ತಾನೆ ಪರದೇವತೆಯೆಂದು ತಾನೆ ಪಿನಾಕಿ ಧನಸ್ಸು ಕೊಂಡು ಜಡನಾದ. ಬಲರಾಮದೇವರು ಸತ್ರಾಜಿತನ ರಾಯನ ಮಣಿಗಾಗಿ ೫ ವರ್ಷ ಪರಮಾತ್ಮನ ಬಿಟ್ಟಾ. ರುದ್ರದೇವರು ಮೊದಲಾದ ಅಷ್ಟದಿಕ್ಪಾಲಕರು ನರಕಾಸುರನ ಬಾಧೆಗೆ ಪರಮಾತ್ಮಗೆ

ಮೊರೆಇಟ್ಟು ಬಾಧೆ ತಪ್ಪಿಸಿಕೊಂಡು ಪರಮಾತ್ಮನ ಪೂಜಾ ಮಾಡಿದರು. ಆದೇ ಕ್ಷಣದಲ್ಲಿ ಪಾರಿಜಾತ ವೃಕ್ಷಾರ್ಥವಾಗಿ ಪರಮಾತ್ಮನು ಮನುಷ್ಯ ನೆಂದು ಆತನಸಂಗಡ ಕದನಕ್ಕೆ ಬಂದು, ಸೋತು, ಸ್ವಾಮೀ ನಿನ್ನ ಪ್ರೇರಣೆ ಮಹತ್ಮೆ ಎಂದು ಕೊಂಡಾಡಿದರು. ಇದು ಪರಮಾತ್ಮನ ಪ್ರೇರಣೆ ಮಹಾತ್ಮೆ. ಈತ ಏನು ಮಾಡಿಸಿದ್ದು ಮರ್ಯಾದೆ ಪ್ರೇರಣೆಪ್ರಕಾರ, ಇಂದ್ರನ ದಳಕ್ಕೆ ಬಂದರೆ ಪುಣ್ಯಮತಿ ಕೊಡುವ. ಜೀವರಿಗೆ ಅಗ್ನಿಯಲ್ಲಿ ಆಲಸ್ಯ ನಿದ್ರೆ ಯಮನಲ್ಲಿ ಕೋಪಾಟೋಪ ನಿರಋತಿ ದಳಕ್ಕೆ ಬಂದರೆ ಪಾಪಬುದ್ಧಿ. ವರುಣನಲ್ಲಿ ವಿನೋದ, ಮರುತನಲ್ಲಿ ಗಮನಾಗಮನ, ಕುಬೇರನಲ್ಲಿ ಸ್ನೇಹ, ಹರನಲ್ಲಿ ಬಂದರೆ ದ್ರವ್ಯತ್ಯಾಗ ಮಾಡಿಸುವ, ಮಧ್ಯ ಕಮಲಕ್ಕ ಬಂದರೆ ವೈರಾಗ್ಯ ಬುದ್ಧಿ ಕೊಡುವ, ಸಕಲ ಕೇಸರ ಗಳಲ್ಲಿ ವ್ಯಾಪಿಸಿದರೆ ಜಾಗ್ರತಿ ಹುಟ್ಟುವದು. ಕರ್ಣಿಕಾ ವಾಸವಾಗೆ ಸ್ವಪ್ನಕಾಂಬ, ನಾಳದೊಳಗೆ ಹೋದರೆ ಗಾಢನಿದ್ರೆಯಾಗೋದು. ಇಷ್ಟು ವ್ಯಾಪಾರ ಅಷ್ಟಭುಜ ನಾರಾಯಣನ ಸಂಚಾರದಿಂದ ಆಗೋದು.

## ಈ ಕಮಲದ ಕರ್ಣಿಕಾದ ವರ್ಣನ

ಮೂಲಾಧಾರಕ್ಕೆ ಹತ್ತಾಂಗುಲಿಮ್ಯಾಲೆ ಕನಕ ವರ್ಣದ ದಳದಲ್ಲಿ ಕದಳೀ ಕುಸುಮದೋಪಾದಿಯಲ್ಲಿ ಬಾಗಿ ಇರುತ್ತದೆ. ಚಂದ್ರಪ್ರಕಾಶ ದೋಪಾದೆಯಲ್ಲಿ ಬೆಳಗುತ್ತಿದೆ. ಮೂವತ್ತೆರಡು ಕೇಸರಗಳಿಂದ ಯುಕ್ತ ವಾಗಿ ಆದೆ. ಕೇಸರಗಳ ಮಧ್ಯದಲ್ಲಿ ಕರ್ನಿಕದದೆ. ಅಲ್ಲಿದ್ದು ಅಷ್ಟದಿಕ್ಪಾ ಲಕರಿಂದ ಸೇವಿತನಾಗಿ ಶ್ರೀ ಭೂ ಸಹಿತನಾಗಿ ಪರಮಾತ್ಮ ಪಹರೆ ತಿರಗು ಥಾನೆ. ಕರ್ನಿಕಾ ಮ್ಯಾಲೆ ಸೂರ್ಯಮಂಡಲ, ಚಂದ್ರಮಂಡಲ, ಅಗ್ನಿ ಮಂಡಲ, ಮೂರು ಮಂಡಲಗಳಿವೆ. ಇದರಮ್ಯಾಲೆ ವಿಶಾಲವಾದ ದೇಶವದೆ. ಅಲ್ಲಿ ನೂರು ಸ್ಫಟಿಕದ ಹವಳದ ಖಂಬದ ತೇರು ಕನಕರತ್ನ ಮಯವಾದದ್ದು. ಅನೇಕ ಸೂರ್ಯ ಪ್ರಕಾಶದಿಂದಿರುವ ವಿಮಾನ ಚಿನ್ನದ ದಾಮಗಳಿಂದ ಘಂಟೆಗಳಿಂದ, ಮುತ್ತಿನ ಗೊಂಚಲಗಳಿಂದ, ತೋರಣ ಗಳಿಂದ, ವಿಚಿತ್ರ ಧ್ವಜ ಪತಾಕೆಗಳಿಂದ ಶೋಭಿಸುತವೆ. ಇಂಥಾ ಪ್ರಣವಾಕಾರ ವಿಮಾನದಲ್ಲಿ ಅನಂತ ಗುಣ ಪರಿಪೂರ್ಣ ಸ್ವಗತ ಭೇದ ಶೂನ್ಯ ಸತ್ವಾದಿ ಗುಣಗಳಿಂದ ಅತ್ಯಂತ ದೂರನಾದ ಸರ್ವ ಜಗದೋ

ದ್ಧಾರಕನಾದ ಸರ್ವ ವಸ್ತುಗಳಿಂದ ಅತ್ಯಂತ ಭಿನ್ನನಾದ ಅನಂತ ಸೂರ್ಯಕೋಟಿ ಪ್ರಕಾಶನಾದ ಮನ್ಮಥ ಕೋಟಿ ಲಾವಣ್ಯನಾದ ಅನಂತ ಬ್ರಹ್ಮಾದಿಗಳಿಗೆ ಸ್ವಾಮಿಯಾದ ಮುಕ್ತರಿಗೆ ಭಕ್ತರಿಗೆ ಅಭೀಷ್ಟ ಪ್ರದನಾದ ಶ್ರೀ ನಾರಾಯಣ ನಾಮಕ ಪರಮಾತ್ಮ ಪ್ರಾಜ್ಞ ಎಂಬ ಹೆಸರುಳ್ಳವ ನಾಗಿ ಅಂಗುಷ್ಠ ಪರಿಮಿತನಾಗಿ ತನ್ನ ದರ್ಶನದಿಂದ ಭಕ್ತರ ಸಂಚಿತ ಆಗಾಮಿಕ ಕರ್ಮಗಳು ನಷ್ಟಮಾಡುವಂಥವನಾಗಿ ಪರಮ ಕರುಣಾ ಸಮುದ್ರನಾಗಿ, ಎಡ ಬಲ ಶ್ರೀ ಭೂ ಸಮೇತ ಮುಕ್ತಾ ಮುಕ್ತರಿಗೆ ನಿಯಾಮಕನಾಗಿ ಈ ರಥದ ಮಧ್ಯದಲ್ಲಿ ಕಲ್ಪವೃಕ್ಷ ನಾಳದಲ್ಲಿ ರತ್ನ ಖಚಿತವಾದ ಚೌಕಮೂಲಿ ಜಗುಲಿಯಲ್ಲಿ ಸೂರ್ಯಕಿರಣಯುಕ್ತ ಸಹಸ್ರ ಫಣಿಯಿಂದ ಶೇಷಹಾಸಿಕೆಯಿಂದ ಒಪ್ಪುವ ಸಿಂಹಾಸನದಲ್ಲಿ ಮಲ್ಲಿಗಿ ಕುಂದ ಮಂದಾರ ಕೇತಕಿ ಮರಗು ಜವಾದಿ ಪುಷ್ಪಹಾರಗಳಿಂದ ಶ್ರೀವತ್ಸ ಕೌಸ್ತುಭಗಳಿಂದ ಅತಿ ಸುಗಂಧ ತಾಂಬೂಲಯುಕ್ತಗಳಿಂದ ಕಸ್ತೂರಿ ತಿಲಕದಿಂದ ಸಹಿತನಾಗಿ ಕೈವಲ್ಯಪದವಿಯನ್ನು ಭಜಕರಿಗೆ ಕೊಡುವಂಥ ವನಾಗಿ ಸ್ತೋತ್ರ ಮಾತ್ರದಿಂದ ತುಷ್ಟವುಳ್ಳವನಾಗಿ ಶಂಖ ಚಕ್ರ ವರದ ಅಭಯಹಸ್ತ ಚತುರ ಹಸ್ತ ಪ್ರದರ್ಶನವುಳ್ಳವನಾಗಿ ಮಂದಹಾಸದಿಂದ ಸಹಿತ ಮನೋಹೃದಯ ಮೂರ್ತಿಯಾಗಿ ವಿಶಾಲವಕ್ಷ ವುನ್ನತಬಾಹು ಉದರ ಕಂಧರನಾಗಿ ಸರಿಗಿ ನ್ಯಾವಳನಾಗಿ ಕಂಠಮಾಲಿ ಬೆರಳಾದಿ ಪರಿ ಪರಿ ವಿಚಿತ್ರ ಅಲಂಕಾರದಿಂದ ಶೋಭಿತನಾಗಿ ಅಣಿಮಾದಿ ಅಷ್ಟೈಶ್ವರ್ಯ ವುಳ್ಳವನಾಗಿ ಸೃಷ್ಟ್ಯಾದ್ಯಷ್ಟಕರ್ತೃವುಳ್ಳವನಾಗಿ ಸುರಮುನಿನಾರದಾದಿ ಗಳಿಂದ, ಪರಮಹಂಸರು ಸನಕಾದಿಗಳು ಗಂಧರ್ವರಿಂದ, ಹೊಗಳಿಸಿ ಕೊಂಬುವಂಥಾವನಾಗಿ, ಊರ್ವಶ್ಯಾದಿ ಸ್ತ್ರೀಯರಿಂದ ನರ್ತನ ಮಾಡಿ ಸುವಂಥ ಚಾಮರ ಬೀಸಿಕೊಂಬುವಂಥಾವನಾಗಿ ವೊಪ್ಪುಥಾನೆ. ಇಂಥಾ ಪರಮಾತ್ಮರನ್ನು ತನ್ನ ಶಕ್ತಿಯಿದ ಸಮಾಧಿಗಳಿಂದ ಯುಕ್ತನಾಗಿ ಧ್ಯಾನ ಮಾಡಿ ಅಪರೋಕ್ಷ ಸಂಪಾದಿಸಿದವನೇ ಜೀವನ್ಮುಕ್ತ. ಜೀವಬಿಂಬನಾದ ಈ ಪರಮಾತ್ಮನ ದರ್ಶನದವಿನಹಾ ಸಂಚಿತ ಆಗಾಮಿ ಅಶ್ಲೇಷಾ, ಪ್ರಾರಬ್ಧ ಭೋಗದಿಂದ ಕ್ಷಯ ವಿರಜಾನದಿ ಸ್ನಾನ ಸ್ವರೂಪ ಜ್ಞಾನಾ ನಂದಾನುಭವ ದಾರಿಗೂ ಪ್ರಾಪ್ತವಿಲ್ಲಾ.

## ಉರದಲ್ಲಿ ದ್ವಾದಶ ದಳಕಮಲ

ಈ ಕಮಲ ಮೂಲಾಧಾರ ಉರದಲ್ಲಿ ದ್ವಾದಶಗಳ ಕಮಲವಿದೆ. ಮುತ್ತಿನವರ್ಣ, ದ್ವಾದಶ ಸೂರ್ಯರು ದಳಗಳಲ್ಲಿ ಇದ್ದಾರೆ. ಆ ಕಮಲಕ್ಕೆ ರುದ್ರಅಭಿಮಾನಿ, ನರಸಿಂಹಮೂರ್ತಿ ಉಪಾಸನೆ ಶೇಷದೇವಗೋಸ್ಕರ ಮಾಡಥಾನೆ. ಹರಿನಾಮಕ ಪರಮಾತ್ಮ ಕಮಲಕ್ಕ ನಿಯಾಮಕ. ದೇವತೆಗಳು ಪರಮಾತ್ಮನ ಜಯಜಯವೆಂದು ಕೊಂಡಾಡಥಾರೆ.

**ಕಂಠದಲ್ಲಿ ಹದಿನಾರುದಳ ಕಮಲ** ಹವಳ ಅರವಿಂದದೋಪಾದಿ ಅದೆ. ಚಂದ್ರಕಳಾಭಿಮಾನಿ ದೇವತೆಗಳು ಹದಿನಾರು (೧೬) ರೂಪದಿಂದ ಅಲ್ಲಿ ವಾಸ. ದಧಿವಾಮನದೇವರ ಆರಾಧನೆ ಮಾಡಥಾರೆ. ಸಪ್ತ ಮರುತುಗಳು ಅಲ್ಲಿ ಹಾರೆ. ಆ ಶೇಷದೇವರು ಕಮಲಕ್ಕ ಅಭಿಮಾನಿ ಲಕ್ಷ್ಮೀನಾರಾಯಣನ್ನ ಅರ್ಚಿಸುಥಾರೆ. ನಾರಾಯಣ ನಾಮಕ ಪರಮಾತ್ಮ ಕಮಲಾಧಾರನಾಗಿ ತನ್ನ ಗುಣದಿಂದ ಜಗತ್ತು ರಕ್ಷಿಸುಥಾನೆ.

**ದ್ವಿದಳ ಕಮಲ ಭ್ರೂಮಧ್ಯದಲ್ಲಿ** ಮಧು ಪುಷ್ಪದೋಪಾದೇಲಿ ವರ್ನ ಬ್ರಹ್ಮವಾಯು ಎರಡು ದಳಗಳಲ್ಲಿ ವಾಸ ಗರುಡದೇವರು ಕಮಲಾಭಿಮಾನಿ ಕೃಷ್ಣನ್ನ ಆರಾಧನೆ ಮಾಡಥಾರೆ. ಅಲ್ಲಿ ಏಳು ಮರುತುಗಳಿದ್ಧಾರೆ. ಕೃಷ್ಣಮೂರ್ತಿ ನಿಯಾಮಕ ಬಹು ತಪಸ್ಸುಮಾಡಿದರೆ ಈ ರೂಪಗಳ ದರ್ಶನಕೊಡೋರು.

## ಶಿರಸ್ಸಿನಲ್ಲಿ ಸಹಸ್ರದಳ ಕಮಲ

ವಜ್ರಪ್ರಕಾಶದಂತೆವರ್ಣ, ವಿಶ್ವಾದಿ ಭಗವದ್ರೂಪಗಳು. ಆ ದಳದಲ್ಲಿ ವಾಸ. ವಾಯುದೇವರು ವಿಶ್ವಾದಿ ಸಹಸ್ರರೂಪ ಧರಿಸಿ, ವಿಶ್ವಾದಿ ಭಗವದ್ರೂಪಗಳ ಅರ್ಚನೆ ಪೂರ್ಣ ಭಕ್ತಿಯಿಂದ ಮಾಡುವಂಥಾವರು. ರುದ್ರಾದಿಗಳಿಂದ ಹೇಳಲಿಕ್ಕ ಶಕ್ಯವಲ್ಲ. ಈ ಕಮಲಕ್ಕ ಅಭಿಮಾನಿ ಬ್ರಹ್ಮದೇವರು. ಸಪ್ತ ಮರುತುಗಳು ಅಲ್ಲಿ ವಾಸ. ಚತುರ್ಮುಖ ಬ್ರಹ್ಮದೇವರು ಶ್ರೀರಂಗಮೂರ್ತಿ ಧ್ಯಾನಮಾಡಥಾರೆ. ವಾಸುದೇವ ನಾಮಕ ಪರಮಾತ್ಮ ಆ ಕಮಲಕ್ಕ ನಿಯಾಮಕನು. ದಾಸೋಹಂ ಎಂದವಗೆ ಸರ್ವದಳಗಳಲ್ಲಿ

ಭಗವದ್ರೂಪ ದರ್ಶನ ಕೊಡೋರು. ಇಷ್ಟು ಬ್ರಹ್ಮನಾಡಿವಳಗೆ ಇದ್ದ ಪ್ರಕರ್ಣ. ಈ ಕಮಲಗಳಲ್ಲಿ ಶ್ವೇತವರ್ಣಾದಿ ವಾಸುದೇವಾದಿ ಭಗವದ್ರೂಪಗಳು ಸೂರ್ಯಮಂಡಲದಲ್ಲಿದ್ದು ಸೂರ್ಯನ ಪ್ರಕಾಶ ಮಾಡಿದ್ದಾರೆ ಇದು ನಿರ್ಮಲಮತಿಯುಳ್ಳವರು ತಿಳಿಯತಕ್ಕದ್ದು.

ಸೂರ್ಯನಿಗೆ ಸಹಸ್ರ ಕಿರಣಗಳು. ಪೂರ್ವ ದಕ್ಷಿಣ ಪಶ್ಚಿಮೋತ್ತರ ಮಧ್ಯ ಹೀಗೆ ೫ ಐದು ಭಾಗ, ಒಂದೊಂದು ಕಡೆಗೆ ೨೦೦ ಇನ್ನೂರು ಕಿರಣದೋಪಾದೆಯಲ್ಲಿ ಸಹಸ್ರ (೧೦೦೦) ಕಿರಣಗಳು ಅವೆ. ಪ್ರಾಚೀ ದೇಶದಲ್ಲಿ ೨೦೦ ಕಿರಣಗಳಲ್ಲಿ ವಾಸುದೇವನಾಮಕ ಪರಮಾತ್ಮ ಮಧು ನಾಮಕನಾಗಿದ್ದಾನೆ. ಕಿರಣ ಕಾಂತಿಗಳು ರಕ್ತಾಂಶಉಳ್ಳಂಥಾವು. ಪರಮಾತ್ಮನು ಅಗ್ನಿಯೋಪಾದೆಯಲ್ಲಿದ್ದು ಅಗ್ನಿ ಮೊದಲಾದ ಅಷ್ಟ ವಸುಗಳಿಂದ ಋಗ್ವೇದ ಪ್ರತಿಪಾದ್ಯನಾಗಿ ಆರಾಧನೆಗೊಳಥಾನೆ. ದಕ್ಷಿಣ ದಿಕ್ಕಿಲಿ ಗೌರಾಂಶವುಳ್ಳಂಥಾ ೨೦೦ ಇನ್ನೂರು ಕಿರಣಗಳಲ್ಲಿ ಸಂಕರುಷಣ ನಾಮಕ ಪರಮಾತ್ಮನು ಮಧುನಾಮಕನಾಗಿ ಶುಕ್ಲವರ್ಣವುಳ್ಳವನಾಗಿ ಯಜುರ್ವೇದಗಳಿಂದ ಪ್ರತಿಪಾದ್ಯನಾಗಿ ಮಧುವಿದ್ಯಾವುಳ್ಳಂಥಾ ವಾಯು ರುದ್ರಾದಿದೇವತೆಗಳಿಂದ ಪ್ರತಿಪಾದ್ಯನಾಗಿದ್ದಾನೆ. ಪ್ರತೀಚಿ ದೇಶದಲ್ಲಿ ಶಾಮರಶ್ಮಿಗಳಿಂದ ಇನ್ನೂರು (೨೦೦) ಕಿರಣಗಳಲ್ಲಿ ಪ್ರದ್ಯುಮ್ನನಾಮಕ ಪರಮಾತ್ಮ ಶ್ಯಾಮವರ್ಣವುಳ್ಳವನಾಗಿ, ಸಾಮವೇದಾಭಿಮಾನಿಗಳಾದಂಥ ಸೂರ್ಯರಿಂದ ಆರಾಧನೆ ಮಾಡಿಸಿಕೊಳಥಾನೆ. ಉತ್ತರದಿಕ್ಕಿಗೆ ದ್ವಿಶತ ನೀಲಾಂಶ ರಶ್ಮಿಗಳಲ್ಲಿ, ಅನಿರುದ್ಧ ನಾಮಕ ಪರಮಾತ್ಮ ನೀಲವರ್ಣವುಳ್ಳವನಾಗಿ ಮಧುವೆಂಬೋ ಹೆಸರಿನಿಂದ ಅಥರ್ವಣ ಇತಿಹಾಸ ಪುರಾಣ ಪ್ರತಿಪಾದ್ಯನಾಗಿ ಚಂದ್ರ ಮೊದಲಾದ ಮರುತಗಳಿಂದ ಉಪಾಸ್ಯನಾಗಿ, ಜಗತ್ತು ಪ್ರಕಾಶಿಸುಥಾನೆ. ಊರ್ಧ್ವ ಭಾಗದಲ್ಲಿ ಪೀತಾಂಶವಾದಂಥ ಇನ್ನೂರು ಕಿರಣಗಳಲ್ಲಿ ನಾರಾಯಣನಾಮಕ ಪರಮಾತ್ಮ ಮಧು ನಾಮಕನಾಗಿ ಉತ್ಕೃಷ್ಟ ಸೂರ್ಯಕಾಂತಿಯಿಂದ ಯುಕ್ತನಾಗಿ ಕೇವಲ ವೇದಾಭಿಮಾನಿಗಳಾದಂಥ ಬ್ರಹ್ಮ ಸರಸ್ವತೀ ಶೇಷ ಗರುಡ ವಾರುಣಿ ಸೌಪರ್ಣ್ಯಾದಿಗಳಿಂದ ಆರಾಧಿತನಾಗಿದ್ದಾನೆ. ಪಂಚಮೂರ್ತಿಗಳು ಸೂರ್ಯನಲ್ಲಿ ಈ ವಿಧದಿಂದ ಇದ್ದ ಪ್ರಯುಕ್ತ ಸೂರ್ಯನಕಿಂತ ಸೋತ್ತಮರಿಂದ

ಪೂಜ್ಯನೋಪಾದಿಯಲಿ ಕಾಣಿಸುಥಾನೆ. ಹನುಮಂತದೇವರು ಓದಿ
ಕೊಂಡು ದ್ರೌಪದಿಗೆ ಕೀಚಕಾದಿ ಉಪದ್ರ ಮೊದಲಾದ ಮಾಡುವಾಗ್ಗೆ
ಸೂರ್ಯನ ಪ್ರಾರ್ಥನೆ ಮಾಡಿದಳು ಎಂಬೋಹಾಗೆ ಕಾಣತದೆ. ಹಾಗೆ
ಪರಮಾತ್ಮನು ವಿಶೇಷಾಕಾರದಿಂದ ಇದ್ದ ಪ್ರಯುಕ್ತ ಸೂರ್ಯನಕಿಂತ
ಉತ್ತಮರು ಆರಾಧಿಸಿದರೆಂದು ತಿಳಿಯಬೇಕು. (ಇದು ಮಧುವಿದ್ಯಾ
ಉಪಾಸನೆ ದೇವತೆಗಳು ಮಾಡುತ್ತಾರೆ. ಮನುಜರಿಗೆ ಯೋಗ್ಯವಲ್ಲ ಇದರ
ಜ್ಞಾನಮಾತ್ರ ವಿರಬೇಕು.)

## ಇತರ ನಾಡಿಗಳ ವಿವರ

ಪೂರ್ವದಲ್ಲಿ ಒಂದು ಸುಷುಮ್ನಾನಾಡಿ ಪ್ರಕರ್ಣ ವಿಸ್ತಾರ ಹೇಳಲ್ಪ
ಟ್ಟಿತು. ಇನ್ನು ೭೨೦೦೦ ಸಾವಿರ ನಾಡಿ ವಿಸ್ತಾರ ಸುಷುಮ್ನನಾಡಿಗೆ
ಬಲಭಾಗದಲ್ಲಿ ಇಡಾ, ಎಡಭಾಗದಲಿ ಪಿಂಗಳ, ಪೂರ್ವಕ್ಕೆ ಧಾರುಣಿನಾಡಿ
ಪಶ್ಚಿಮಕ್ಕೆ ವಜ್ರಿಕಾನಾಡಿ, ನಾಲ್ಕು ಅಂಶಗಳು, ಇವಕ್ಕೆ ಇಡಾ ೫೦
ಅಂಶ ಪಿಂಗಳಾ ೫೦ ಅಂಶವೆಂದು ಒಂದು ಪಕ್ಷ, ಇಡಾ ೫೦೦ ಪಿಂಗಳಾ
೫೦೦ ಎಂದು ಒಂದು ಪಕ್ಷ, ೩೬೦೦೦ ಇಡಾ, ೩೬೦೦೦ ಪಿಂಗಳಾ ಹೀಗೆ
ಒಂದು ಪಕ್ಷ ಹೀಗೆ ಮೂರು ಪ್ರಕಾರ ತಿಳಿಯತಕ್ಕದ್ದು. ಪ್ರಧಾನನಾಡಿ
೧೦೧ ಸುಷುಮ್ನಾ ನಾಡಿ ಪಂಚಾಂಶ ವುಳ್ಳಂಥಾದ್ದು ಒಂದೇನಾಡಿ ಯೆಂದು
ಹೇಳಲ್ಪಟ್ಟಿತು. ೫೦ ಪ್ರಕಾರ ವಿಸ್ತಾರ ನೂರಾವೊಂದು ೧೦೧ ನಾಡಿಗೆ
ಒಂದು ಸುಷುಮ್ನಾನಾಡಿ ಹೇಳೋದು ಬಿಟ್ಟರೆ ಎಡಭಾಗದಿಂದ ಹುಟ್ಟಿ
ಬಲಭಾಗಕ್ಕ ಪಸರಿಸಿದ ಇಡಾನಾಡಿ ಪ್ರಥಮದಲ್ಲಿ ೫೦ ಇದಕ್ಕ ಒಂದಕ್ಕೆ
ಹತ್ತು ಸಂಖ್ಯಾ ಆದರೆ ೫೦೦ ನಾಡಿ ಆಗತದೆ. ಬಲಗಿವಿಗೆ ಪಸರಿಸಿ ಅವೆ
ಇವು ಉತ್ತರಾಯಣ ನಾಡಿಗಳೆಂದು ಕರಸುತ್ತವೆ. ಈ ನಾಡಿಗಳಿಂದ
ಮುಖ್ಯ ಪ್ರಾಣದೇವರು ಮಹಾ ಯೋಗ್ಯರನ್ನ ಮೃತಿಕಾಲದಲ್ಲಿ ಪ್ರಯಾಣ
ಮಾಡಿಸಿ ಕರಕೊಂಡು ಹೋಗಥಾರೆ. ಇದೇ ಉತ್ತರಾಯಣಮಾರ್ಗ.
ಸೂರ್ಯನ ೧೦೦೦ ಕಿರಣಗಳೊಳಗೆ ೫೦೦ ಉತ್ತರಾಯಣ ೫೦೦ ದಕ್ಷ
ಣಾಯನ ಹೀಗೆ ಇದರೊಳಗೆ ಸೂರ್ಯನ ಉತ್ತರಾಯಣ ರಶ್ಮಿಗಳು
೫೦೦ ನಾಡಿಗಳಲ್ಲಿ ಅವೆ. ಬಲಗಿವಿಯಿಂದ ಪ್ರಯಾಣ ದಾವಾಗಾದರೆ,
ಅವನೇ ಉತ್ತರಾಯಣದಲ್ಲಿ ಮೃತಿ ಐದಿದನ. ಇದಲ್ಲದೇ ಪ್ರಸಿದ್ಧ ಉತ್ತ

ರಾಯಣ ಕಾಲದಲ್ಲಿ ಮೃತಿಯಾದವಗೆ ಮುಖ್ಯ ಪ್ರಾಣದೇವರು ಎಡದ ಕಿವಿಯಿಂದ ಕರಕೊಂಡು ಹೋಗಥಾರೆ. ಅವಗೆ ಉತ್ತರಾಯಣ ಮೃತಿ ಇಲ್ಲ. ಉತ್ತರಾಯಣ ಮಾರ್ಗವೇ ದೇವಯಾನ ಮಾರ್ಗವೆಂದು ಕರೆಸು ವದು. ಅರ್ಚರಾದಿ ಮಾರ್ಗವೆಂಬೋದು ಇದೇ ದಕ್ಷಣಾಯನ.

ಬಲಭಾಗಕ್ಕೆ ಹುಟ್ಟಿ ಎಡಭಾಗಕ್ಕ ಪಸರಿಸಿದವು ಇಡಾನಾಡಿಯೆಂದು ಕರೆಸುತ್ತದೆ. ದಕ್ಷಣಾಯನ ೫೦೦ ರಸ್ಮಿಗಳು ಅಲ್ಲಿ ಅವೆ. ೫೦೦ ನಾಡಿ ಎಡದ ಕಿವಿಗೆ ಹೋಗಿವೆ. ಅಲ್ಲಿ ಸೂರ್ಯನ ದಕ್ಷಣಾಯನ ೫೦೦ ರಶ್ಮಿ ಆವೆ. ಅದು ದಕ್ಷಣಾಯನಮಾರ್ಗ ಪಿತೃಯಾನಮಾರ್ಗ. ಧೂಮ್ರಾದಿ ಮಾರ್ಗವೆಂದು ಕರಸುತ್ತದೆ. ಮುಖ್ಯ ಪ್ರಾಣದೇವರು ಈ ದ್ವಾರದಿಂದ ಕರಕೊಂಡು ಹೋದರೆ, ದಕ್ಷಣಾಯನಮೃತಿ ಆಯಿತೆಂದು ತಿಳಿಯಬೇಕು. ಅಲ್ಲಿಂದ ಹೋದವಗೆ ಪುನಃ ಭೂಮಿಯಲ್ಲಿ ಜನ್ಮವಾಗುತ್ತದೆ. ದೇವ ಯಾನದಿಂದ ಹೋದವಗೆ ಜನ್ಮವಿಲ್ಲ. ಸತ್ಯಲೋಕ ತಪೋಲೋಕ ಜನೋಲೋಕದಲ್ಲಿ ಕುಳಿತು, ಪರಮಾತ್ಮನ ಧ್ಯಾನಮಾಡಿ ಸುಖಬಡಥಾನೆ ಸುಷುಮ್ನಾನಾಡಿಯಿಂದ ಮುಖ್ಯ ಪ್ರಾಣದೇವರು ಕರಕೊಂಡು ಹೋದರೆ ವೈಕುಂಠ ಭೂಭಾಗ ಪರಿಯಂತರವೂ ವಿಚಿತ್ರ ಸುಖಬಟ್ಟು ಹರಿಯನ್ನ ಆರಾಧಿಸುತ್ತ ಇರಥಾನೆ. ಇದೇ ಬ್ರಹ್ಮಯಾನವೆಂದು ಕರೆಸುತ್ತದೆ. ಮುಖ್ಯ ಪ್ರಾಣದೇವರು ದಾರದಾರ ಸಾಧನಸಂಪತ್ತು ನೋಡಿ, ಮೂರು ಮಾರ್ಗದಿಂದ ಶರೀರ ಬಿಡಿಸಿ ಕರಕೊಂಡು ಹೋಗಥಾರೆ. ಮುಂದೆ ಜನ್ಮ ಗಳುಳ್ಳವಗೆ ಎಡದಕಿವಿ ಪ್ರಯಾಣ ಪಿತೃಯಾನ ಧೂಮ್ರಾದಿ ಮಾರ್ಗ ಮಹರ್ಲೋಕಾದಿ ಸತ್ಯಲೋಕ ಪರಿಯಂತರವು ವಾಸಮಾಡಲಿಕ್ಕೆ ಅವರು ಅಧಿಕಾರಿಗಳು. ಇನ್ನು ವೈಕುಂಠ ಭೂಭಾಗಕ್ಕ ಹೋಗೋ ಸಾಧನ ದಾರಿಗೆ ಘಟಣೆ ಪೂರ್ಣಸಾಧನ ಉಳದ ಪೂರ್ಣಸಾಧನ ಮಾಡಿಕೊಳ್ಳಲಿ ಯೆಂದು ಬಲಗಿವಿ ಪಿಂಗಳಾನಾಡಿದ್ವಾರಾ ಕರಕೊಂಡು ಹೋಗಥಾರೆ. ದೇವಯಾನಮಾರ್ಗ ಬಲಗಿವಿಯಿಂದ ಪ್ರಯಾಣ. ಕಿಂಚಿತ್ತಾದರೂ ದಾರಿಗೆ ಸಾಧನ ಶೂನ್ಯವಿಲ್ಲವೋ ಅವರಿಗೆ ಬ್ರಹ್ಮನಾಡಿಯಿಂದ, ಬ್ರಹ್ಮ ರಂಧ್ರದಿಂದ ವೈಕುಂಠ ಭೂಭಾಗಕ್ಕ ಕರಕೊಂಡು ಹೋಗಥಾರೆ. ಅವರು ಸತ್ಯಲೋಕ ಲೆಕ್ಕಿಸೋದಿಲ್ಲ.

ದೇವಯಾನ ಬ್ರಹ್ಮಯಾನದವರು ಹೋಗೋ ವ್ಯಾಖ್ಯೆ ಹ್ಯಾಗೆ ಲಯ ಚಿಂತನೆಮಾಡಿ ಹೋಗಥಾರೆ. ಪರಮಾತ್ಮನಲ್ಲಿ ಮನಸ್ಸು ಇಟ್ಟು ಅನ್ಯ ವಿಷಯ ಚಿಂತನೆ ಸರ್ವಥಾ ಬಿಡೋಣ. ಹಿರೇರು ಹೇಳಿದ ಉಕ್ತ ರೀತಿಪ್ರೊಳಗೆ ಹರಿಗುರುಗಳು ಯಥಾಶಕ್ತಿ ಪ್ರೇರಿಸಿದಪ್ರಕಾರ ಬರಿಯಲ್ಪಡತದೆ.

## ಲಯಚಿಂತನದ ಅವಶ್ಯಕತೆ

ಪೃಥಿವಿ ಮೊದಲುಮಾಡಿ ಸಮಗ್ರ ತತ್ವಗಳದ್ವಾರಾ ದಾವದಾವ ತತ್ವದಿಂದ ಉತ್ಪನ್ನ ಆ ತತ್ವಗಳು ವ್ಯತ್ಕ್ರಮದಿಂದ ಭೂಮಿ ಅಪ್ಪಿನಲ್ಲಿ ಹಾಗು ಅವ್ಯಕ್ತ ತತ್ವ ಪರಿಯಂತರವೂ ಲಯ ಹೊಂದಿಸಬೇಕು. ಹಾಗೆ ತತ್ವಾಭಿಮಾನಿಗಳು ಧರಣಿ ಶನೈಶ್ಚರ ಆರಂಭಿಸಿ ಬ್ರಹ್ಮ ಲಕ್ಷ್ಮೀ ಪರಿಯಂತರಕ್ಕೂ ಲಯ ಚಿಂತಿಸಿ ಅವ್ಯಕ್ತ ತತ್ವದಿಂದ ಸಹಿತಳಾದ ರಮಾದೇವೇರನ ಪರಮಾತ್ಮನೊಳಗೆ ಚಿಂತಿಸಿ, ಆ ಪರಮಾತ್ಮನೇ ಸರ್ವೋತ್ಕೃಷ್ಟ ಸರ್ವತಂತ್ರ ಸ್ವತಂತ್ರ ಸರ್ವೋತ್ತಮನೆಂದು ತಿಳಿದು ಆತನೇ ನಮಗ ಬಿಂಬನೆಂದು ಧ್ಯಾನಮಾಡಿ ತನ್ನ ಮನಸ್ಸು ಬಿಂಬನ ಪಾದದಲ್ಲಿ ಚಂಚಲವಾಗಧಾಂಗ ಇಟ್ಟು, ಅವನನ್ನೇ ಸ್ಮರಿಸುತ್ತ ಶರೀರ ತ್ಯಾಗ ಮಾಡಿದರೆ ಅವನು ಪರಮಾತ್ಮನಿಂದ ದತ್ತವಾದ ಸ್ವಗತಿಗೆ ಹೋಗಥಾನೆ. ಅವಗೆ ಜನನ ಮರಣಾದಿಗಳು ಬಾಹೋದಿಲ್ಲ. ನಿತ್ಯವಾದ ಮೋಕ್ಷವಾಗುತ್ತದೆ. ತತ್ರ್ರಯುಕ್ತವಾಗಿ ಜ್ಞಾನಿಗಳು ಅಗತ್ಯ ಲಯ ಚಿಂತನೆ ತಿಳಿದು ಪರಮಾತ್ಮನಲ್ಲಿ ಮನಸ್ಸು ಇಟ್ಟು ಸ್ಮರಿಸತಕ್ಕದ್ದು.

## ಲಯದ ಮಾರ್ಗಗಳ ಪ್ರಕಾರ

ಗರುಡಮಾರ್ಗ ಶೇಷಮಾರ್ಗ ಎರಡು ಪ್ರಕಾರ. ಇದರೊಳಗೆ ಶೇಷಮಾರ್ಗ ವೆಂಬೋದು ಕಾಮಮಾರ್ಗ, ಗರುಡಮಾರ್ಗವೆಂಬೋದು ಇಂದ್ರಮಾರ್ಗ. ಇಂದ್ರಮಾರ್ಗದೊಳಗೆ ಬಹು ಮಾರ್ಗಗಳಿವೆ.

ಮೊದಲು **ಕಾಮಮಾರ್ಗವೇ ಶೇಷಮಾರ್ಗ** ಹೇಳಲ್ಪಡುತ್ತದೆ. ಕಾಮಮಾರ್ಗದಪ್ರಕಾರ ಗಂಧರ್ವ ಪ್ರಮುಖರಾದಂಥಾ ಸರ್ವರೂ ಮತ್ತು ದೇವಾನುಗರಾದಂಥ ಆಜಾನುಜ ದೇವತೆಗಳು ಕುಬೇರನ್ನ

ಐದುಥಾರೆ. ಇಷ್ಟುಜನರಿಂದ ಕೂಡಿದಂಥ ಕುಬೇರನು ವರುಣನಾಧೀನ ನಾಗಿ ಚಂದ್ರನ ಪ್ರವೇಶ ಮಾಡಥಾನೆ. ಈ ಸೋಮನು ವಿಷ್ವಕ್ ಸೇನಾದಿಗಳಿಂದ ಕೂಡಿ ಪರಮಾತ್ಮನ ಸುಪಾರ್ಷದರಾದಂಥ ಜಯ–ವಿಜಯಾದಿಗಳಿಂದ ಸಹಿತನಾಗಿ ಅನಿರುದ್ದನ್ನ ಪ್ರವೇಶ ಮಾಡಥಾನೆ. ಆ ಅನಿರುದ್ಧನು ಯೋಗೇಶ್ವರರಾದಂಥ ಸನಕಾದಿಗಳಿಂದ ಸಹಿತನಾಗಿ, ಕಾಮದೇವರಾಧೀನನಾಗುಥಾನೆ. ಆ ಕಾಮದೇವರು ಶೇಷದೇವರ ಹೆಂಡತಿಯಾದ ವಾರುಣಿಯಲ್ಲಿ ಲಯ, ವಾರುಣಿ ತನಗೆ ಸ್ವಪತಿಯಾದ ಶೇಷನಲ್ಲಿ ಲಯ ಹೊಂದಥಾಳೆ ಶೇಷದೇವರು ಸರಸ್ವತಿಯಲ್ಲಿ ಲಯ ವಾಗುಥಾರೆ. ಸರಸ್ವತೀ ತನಗೆ ಸ್ವಪತಿಯಾದ ಬ್ರಹ್ಮದೇವರಾಧೀನಳಾಗು ಥಾಳೆ. ಬ್ರಹ್ಮದೇವರು ತೇಜೋರೂಪಳಾದ ಶ್ರೀ ಲಕ್ಷ್ಮೀದೇವೇರ ಅಧೀನ ನಾಗಿ ನಿರ್ವ್ಯಾಪಾರನಾಗುಥಾನೆ. ಆ ಶ್ರೀ ದೇವಿಯರು ಜಗದ್ವ್ಯಾಪಾರ ಬಿಟ್ಟು ಪರಮಾತ್ಮನ ಧ್ಯಾನೈಕಪರಳಾಗಿ ಲಯಹೊಂದಥಾಳೆ. ಇದು ಶೇಷಮಾರ್ಗ.

ಇನ್ನು **ಇಂದ್ರಗೆ ಗರುಡಮಾರ್ಗಲಯ** ಹೇಳಲ್ಪಡುತ್ತದೆ.

(೧) ವರ್ಣಾಶ್ರಮಾಚಾರರತರಾದಂಥಾ ಮಾನುಷೋತ್ತಮರು ನಿರಋತಿಯನ್ನು ಹೊಂದುಥಾರೆ. ಆ ನಿರಋತಿ ಸಮಗ್ರ ಪಿತೃಗಳಿಂದ ಯುಕ್ತನಾಗಿ ಪೃಥು ಮೊದಲಾದ ಶತ ರಾಜಸೋತ್ತಮರಿಂದ ಕೂಡಿ, ಹಾಗೇವೆ ವೈವಸ್ವತಾದಿ ೧೨ ಮನುಗಳಿಂದ ಯುಕ್ತನಾಗಿ ಧರ್ಮನಲ್ಲಿ ಕೂಡಥಾನೆ. ಆ ಧರ್ಮನು ಸ್ವಾಯಂಭು ಮನುವಿನಲ್ಲಿ ಪ್ರವೇಶಮಾಡ ಥಾನೆ. ಆ ಸ್ವಾಯಂಭು ಮನು ಶಕ್ರನ ಪ್ರವೇಶ ಮಾಡಥಾನೆ. ಇಂದ್ರ ನಲ್ಲಿಗೆ ಇದು ಒಂದು ಮಾರ್ಗವಾಯಿತು. ಇನ್ನು ಕೆಲವು ಮಾರ್ಗಗ ಳಿಂದ ಬಂದು ಇಂದ್ರನಲ್ಲಿ ಕೂಡಥಾರೆ.

(೨) ಮರುದ್ಗಣ ೪೯ ಪ್ರವಾಹ ವಾಯು ಸಹಿತರಾಗಿ ಅಹಂಕಾ ರಿಕ ಪ್ರಾಣನಲ್ಲಿ ಲಯ. ಅಹಂಕಾರಿಕ ಪ್ರಾಣನು ಇಂದ್ರದೇವರಲ್ಲಿ ಲಯ

(೩) [ಅ] ಸಾಧ್ಯಗಣದಿಂದ ಯುಕ್ತನಾಗಿ ಗಣೇಶನು ಆಕಾಶ ದಲ್ಲಿ ಇರುಥಾನೆ. [ಬ] ಮ್ಮತ್ಯಗಣ ಋಭುಗಣಗಳು ಪೃಥ್ವಿಯನ್ನು

ಕೂಡಥಾರೆ. [೮] ಅಗ್ನಿಪುತ್ರರು ಸಮಸ್ತರು ಉಕ್ತರಾದ ದೇವತೆಗಳು ಅಗ್ನಿಯಲ್ಲಿ ಲಯಹೊಂದುಥಾರೆ. ಅಗ್ನಿ ಆದಿತ್ಯನಲ್ಲಿ ಲಯಹೊಂದುಥಾನೆ ಹೀಗೆ ಆಕಾಶದಲ್ಲಿಯ ಗಣೇಶ ಪೃಥ್ವಿ ಆದಿತ್ಯ ಈ ಮೂರು ಮಾರ್ಗದವರು ಬೃಹಸ್ಪತ್ಯಾಚಾರ್ಯರನ್ನ ಕೂಡಥಾರೆ. ಬೃಹಸ್ಪತ್ಯಾಚಾರ್ಯರು ಶಕ್ರ ನಲ್ಲಿ ಲಯಹೊಂದುಥಾರೆ.

(೪) ಮತ್ತೂ ಶಕ್ರನ ಪ್ರವೇಶ ಮಾಳ್ಪರನ್ನು ಹೇಳಲ್ಪಡತ್ತದೆ. ಬ್ರಹ್ಮದೇವರ ಏಳುಮಂದಿ ಮಕ್ಕಳು ಮರೀಚ್ಯಾದಿಗಳು ಭೃಗು ಮುನೀ ಶ್ವರರಲ್ಲಿ ಭೃಗು ಋಷಿಗಳು ದಕ್ಷಪ್ರಜೇಶ್ವರನಲ್ಲಿ ಲಯ ಹೊಂದುಥಾರೆ. ದಕ್ಷಪ್ರಜೇಶ್ವರನು ಶಕ್ರನಲ್ಲಿ ಲಯಹೊಂದುಥಾನೆ. ಹೀಗೆ ಇಂದ್ರನಲ್ಲಿಗೆ ನಾಲ್ಕು ಮಾರ್ಗಸ್ಥರು ಬಂದು ಕೂಡಥಾರೆ. [೧] ಸ್ವಾಯಂಭುಮನುವಿನ ಮಾರ್ಗ [೨] ಅಹಂಕಾರಿಕ ಪ್ರಾಣ ಪ್ರವಾಹವಾಯು [೩] ಬೃಹಸ್ಪ- ತ್ಯಾಚಾರ್ಯರ ಮಾರ್ಗ [೪] ದಕ್ಷಪ್ರಜೇಶ್ವರನ ಮಾರ್ಗ

ಈ ನಾಲ್ಕು ಮಾರ್ಗದವರಿಂದ ಕೂಡಿದಂಥಾ ಇಂದ್ರನು ಸೌಪರಣೀ ದೇವೇರನ್ನ ಪ್ರವೇಶ ಮಾಡಥಾನೆ. ಸೌಪರ್ಣಿ ತನ್ನಗೆ ಸ್ವಪತಿಯಾದ ಗರುಡನಲ್ಲಿ ಲಯಹೊಂದುಥಾಳೆ. ಗರುಡನು ವಾಣಿಯಲ್ಲಿ ಪ್ರವೇಶಿಸು ಥಾನೆ ವಾಣಿ ಬ್ರಹ್ಮದೇವರ ಅಧೀನಳಾಗುಥಾಳೆ. ಬ್ರಹ್ಮನು ತೇಜೋರೂಪ ಳಾದ ಲಕ್ಷ್ಮೀ ಅಧೀನನಾಗುಥಾನೆ. ಶ್ರೀ ರಮಾದೇವೇರು ಶ್ರೀ ಪರಮಾ ತ್ಮನ ಅತಿ ಸಮೀಪವಾದ ಲಯ ಹೊಂದುಥಾಳೆ. ಈ ಗರುಡ ಶೇಷಮಾ ರ್ಗಗಳು ಆರ್ಯರು ಮೋಕ್ಷಕ್ಕೆ ಕೇವಲ ಸಾಧನವೆಂದು ಹೇಳುಥಾರೆ. ಈ ಮಾರ್ಗ ತಿಳಿದು ನಿತ್ಯದಲ್ಲಿ ಅಭ್ಯಾಸಮಾಡಿದರೆ ಮೋಕ್ಷವಾಗುವದೆಂದು ಆರ್ಯರ ಸಮ್ಮತ.

ಲಯ ನಾಲ್ಕುವ್ಯಾಳ್ಯ ತಿಳಿಯತಕ್ಕಂಥಾದ್ದು

(೧) ಪೂರ್ವ ಸೃಷ್ಟಿಗೆ ಕಡೇಲಿ ದೇವರಿಂದ ಮಾಡುವಂಥಾ ಲಯ.

(೨) ಇನ್ನು ಬ್ರಹ್ಮದೇವರ ದಿನ ಸೃಷ್ಟಿಗೆ ಒಂದು ಲಯ. ಇನ್ನು

(೩) ಪ್ರತಿ ಮನು ಕಲ್ಪದಲ್ಲಿ ಲಯ ಅಥವಾ ಮನುಷ್ಯಯೋನಿ ಜೀವಗೆ ಒಂದು ಸೃಷ್ಟಿಗೆ ಶರೀರ ತ್ಯಾಗ ಲಯ ಮತ್ತು

(೪) ನಿತ್ಯದಲ್ಲಿ ಪ್ರತಿದಿನ ಎಚ್ಚರಾದ ಸೃಷ್ಟಿಗೆ ನಿದ್ರಾಸಮಯ ಲಯ ಹೀಗೆ ನಾಲ್ಕು ಸಮಯ ಲಯ. ಸಜ್ಜನರು ನಿತ್ಯದಲ್ಲಿ ಎಚ್ಚತ್ತು ನಿದ್ರೆಉಳ್ಳಂಥವರು ಸಾಯಂಕಾಲಕ್ಕ ಉಕ್ತಪ್ರಕಾರ ಲಯ ಚಿಂತನಮಾಡಿ ಪರಮಾತ್ಮ ಏಕಾಂತದಲ್ಲಿ ರಮಾ ಸಮೇತನಾಗಿ ಇರುಥಾನೆಂದು ತಿಳಿದು ಶಯನಮಾಡಬೇಕು. ಮುಖ್ಯ ಪ್ರಾಣದೇವರು ಶ್ರೀ ರಮಾರಮಣನಾದ ಪರಮಾತ್ಮನ ಧ್ಯಾನದಲ್ಲಿ ಎಚ್ಚರವುಳ್ಳವನಾಗಿರುಥಾನೆ. ಉಕ್ತಪ್ರಕಾರ ಇತರ ದೇವತೆಗಳು ಇದ್ದರೂ ಎಚ್ಚರವಿಲ್ಲದೇ ಮುಖ್ಯ ಪ್ರಾಣದೇವರಾಧೀನ ರಾಗಿರುಥಾರೆ. ನಿರಂತರವೂ ಸಾಯಂಕಾಲಕ್ಕ ಅಗತ್ಯ ಹೀಗೆ ಚಿಂತನೆ ಮಾಡಿದರೆ ಇಂಥಾ ಲಯ ಜಿತವಾಗುತ್ತದೆ. ಇಂಥಾ ಜಿತಲಯ ಶರೀರ ತ್ಯಾಗವ್ಯಾಳಿಗೆ ಅಭ್ಯಸ್ತ(ಪ್ರಾಪ್ತ)ವಾಗತದೆ. ನಿತ್ಯದಲ್ಲಿ ಈ ಧ್ಯಾನಮಾಡಿದ ಪುಣ್ಯದಿಂದ ಮುಖ್ಯ ಪ್ರಾಣಾಂತರ್ಯಾಮಿ ಪರಮಾತ್ಮ ಪ್ರೀತನಾಗಿ ಇದೇ ಪ್ರಕಾರ ಧ್ಯಾನಕ್ಕ ಮನಸ್ಸು ಸಾನುಕೂಲ ಮಾಡಿಕೊಡಥಾನೆ. ಪರಮಾತ್ಮನ ಸ್ಮೃತಿ ಅಂತ್ಯಕಾಲಕ್ಕ ಒದಗಿದರೆ ಜನ್ಮಬಾಹೋದಿಲ್ಲ. ಪರಮಾತ್ಮ ಸಂಪದವಾದ ಮೋಕ್ಷ ಕೊಡಥಾನೆಂದು ಪ್ರಮಾಣದಿಂದ ಸಿದ್ಧವಾದಕಾರಣ ಅಗತ್ಯ ನಿತ್ಯದಲ್ಲಿ ಮಲಗುವ ವ್ಯಾಳ್ಯ ಲಯ ಚಿಂತನೆ ಮಾಡಿ ಎಚ್ಚರವಾಗೋಣ ಕ್ರಮದಿಂದ ಸೃಷ್ಟಿ ಚಿಂತನೆಮಾಡಬೇಕು.

ಪರಮಾತ್ಮನಿಂದ ನೀಚ ಉತ್ಪತ್ತಿದ್ವಾರ ತನ್ನ ಪರಿಯಂತರವೂ ಉಕ್ತಪ್ರಕಾರ ಕ್ರಮವೇ ಸೃಷ್ಟಿ ಚಿಂತನೆ. ತನ್ನಿಂದ ಪರಮಾತ್ಮನತನಕ ವ್ಯುತ್ಕ್ರಮದಿಂದ ನೀಚರನ್ನು 'ಉತ್ತಮರಲ್ಲಿ ಹೊಂದಸೋಣವೇ ಲಯ ಚಿಂತನೆ. ಶ್ರೀಹರಿ ಗುರುಗಳು ಪ್ರೇರಿಸಿದಷ್ಟು ಬರೆಯಲ್ಪಟ್ಟಿತು.

## ಎಪ್ಪತ್ತೆರಡುಸಾವಿರದಾ ನೂರಾಒಂದು ನಾಡಿ

ಕ್ರಮಗಳು ಬರೆಸಿದಷ್ಟು ಬರೆಯಲ್ಪಡುತ್ತವೆ ನೂರಾಒಂದು ಪ್ರಧಾನ ನಾಡಿಗಳು ವೃಷಣಾಸನ ಮಧ್ಯದಲ್ಲಿ ಗಡ್ಡೆ ಎಂಬೋ ಭೂಮಿ ಇದ್ದು ಬಿದರೋಪಾದಿಯಲ್ಲಿ ಮೂರು ಪದೆ ಉತ್ಪನ್ನವಾಗಿ ಅದೆ. ಮಧ್ಯಪೊದೆ (೫) ಅಂಶದಿಂದ ಯುಕ್ತವಾಗಿ ನೆಟ್ಟಗೆ ಬ್ರಹ್ಮರಂಧ್ರಕ್ಕ ಹೋಗಿದೆ. ಇದು ಒಂದೇ ನಾಡಿ. ಎಡಭಾಗದಲ್ಲಿದ್ದು ೫೦ ಅಂಶದಿಂದ ಉತ್ಪನ್ನವಾಗಿ

ಬಲಗಿವಿಗೆ ಪಸರಿಸಿ ಹೋಗಿದೆ. ಬಲಭಾಗದಲ್ಲಿ ಪಿಂಗಳಾನಾಡಿ ೫೦ ಅಂಶ ದಿಂದ ಉತ್ಪನ್ನವಾಗಿ ಬೆಳೆದು ಎಡಗಿವಿಗೆ ಹೋಗಿದೆ. ಹೀಗೆ ೧೦೧ ನಾಡಿಗೆ ಇದರ ಪೆಂಟೆಗಳು ೭೨೦೦೦ ಇದರ ವಿಸ್ತಾರ ಹರಿ ಗುರುಗಳು ಪ್ರೇರಿಸಿಧಾಂಗೆ ಬರಿಯಲ್ಪಡತದೆ. ಪ್ರಧಾನನಾಡಿ (೧೦೧) ಇದಕ್ಕೆ ಒಂದನಾಡಿಗೆ ಹತ್ತ ಪ್ರಕಾರ ೧೦×೧೦ ನೂರು (೧೦೦) ನಾಡಿ ಒಳಗೆ ಒಂದಕ್ಕೆ ಹತ್ತು ಸಂಖ್ಯಾಪ್ರಕಾರ ನಾವಿರ ನಾಡಿ ಈ ಸಾವಿರನಾಡಿಗಳಲ್ಲಿ ೫೦೦ ಬಲಗಿವಿಗೆ ಬಂದರೆ ಇಲ್ಲಿ ಇಡಾ ನಾಡಿಗಳಲ್ಲಿ ಸೂರ್ಯನ ಉತ್ತರಾಯಣ ೫೦೦ ಕಿರಣಗಳಿವೆ. ಬಲಭಾಗದಿಂದ ಪಿಂಗಳಾಂಶದಿಂದ ಎಡಕಿವಿಗೆ ೫೦೦ ನಾಡಿಗಳಲ್ಲಿ ಸೂರ್ಯನ ದಕ್ಷಣಾಯನ ೫೦೦ ಕಿರಣಗಳಿವೆ. ಬಲಗಿವಿಯಿಂದ ಪ್ರಯಾಣಮಾಡಿದರೆ ಇದೇ ಉತ್ತರಾಯಣ ಮರಣ. ಇದೇ ದೇವಯಾನಮಾರ್ಗ. ಎಡದ ಗಿವಿಯಿಂದ ಪ್ರಯಾಣಮಾಡಿದರೆ ಇದೇವೇ ದಕ್ಷಣಾಯನ ಮರಣ. ಇದೇ ಧೂಮ್ರಾದಿ ಮಾರ್ಗ ಹೀಗೆ ಸಾವಿರನಾಡಿ ಇದರ ವಿವರ

ಹೀಗೆ ನೂರಾಒಂದು (೧೦೧) ಮುಖ್ಯ ಪ್ರಧಾನನಾಡಿಗಳು
ಈ ೧೦೧ ಕ್ಕೆ ಒಂದೊಂದಕ್ಕೆ
೧೦೦ ರಂತೆ ಶಾಖಾ ಬೆಳೆದು

೧೦೧೦೦ ಹತ್ತುಸಾವಿರ ನೂರು ನಾಡಿಗಳು

ಇದರಲ್ಲಿ ೧೦೦ ಶಾಖಾ ನಾಡಿಗಳು ಸುಷುಮ್ನಾದವು
೫೦೦೦ ,, ,, ಪಿಂಗಳದವು
೫೦೦೦ ,, ,, ಇಡಾಂಶ

ಈ ಹತ್ತುಸಾವಿರದಾ ನೂರಕ್ಕೆ ೪ ಪ್ರಕಾರ ವಿಭಾಗ

| | | | |
|---|---|---|---|
| ೧. | ೧೦೦ ನೂರು ನಾಡಿಗಳಿಗೆ | ೧೦ ಶಾಖೆಯಂತೆ | ೧೦೦೦ |
| ೨. | ೧೦೦ ನೂರು ನಾಡಿಗಳಿಗೆ | ೯ ಶಾಖೆಯಂತೆ | ೯೦೦ |
| ೩. | ೩೦೦ ನಾಡಿಗಳಿಗೆ | ೮ ಶಾಖೆಯಂತೆ | ೨೪೦೦ |
| ೪. | ೯೬೦೦ ನಾಡಿಗಳಿಗೆ | ೬ ಶಾಖೆಯಂತೆ | ೫೭೬೦೦ |
| | ೧೦೧೦೦ ಇವಕ್ಕೆ | | ೬೧೯೦೦ |

೬೧೯೦೦ ಹಿಂದೆ ಹೇಳಿದವು ಒಟ್ಟಿಗೆ.
೧೦೧೦೦ ಮುಖ್ಯ ನಾಡಿಗಳು
೧೦೦ ಮೊದಲಿಗೆ ಹೇಳಿದ ಪ್ರಧಾನ ನಾಡಿಗಳು

೭೨೧೦೧

ಅಂತೂ ಎಪ್ಪತ್ತೆರಡು ಸಾವಿರಾ ಒಂದುನೂರಾ ಒಂದು ನಾಡಿ ೭೨ ಸಾವಿರ ನಾಡಿಗಳಲ್ಲಿ ೭೨ ಸಾವಿರ ಭಗವದ್ರೂಪಗಳಿವೆ. ಇವುಗಳು ಇಡಾ ಪಿಂಗಳಮೋವಾದೆಯಲ್ಲಿ ಎರಡುಭಾಗದಿಂದ ಅವೆ. ಬಲಭಾಗಕ್ಕ ೩೬೦೦೦ ಸಾವಿರ ನಾಡಿಗಳು ಅವೆ. ಈ ನಾಡಿಗಳು ಮಹತತ್ವಾತ್ಮಕ. ಅಲ್ಲಿ ಬ್ರಹ್ಮ ದೇವರು ವಾಯುದೇವರು. ಸರಸ್ವತೀ ಭಾರತೀ ನಾಲ್ವರು ಅಭಿಮಾನಿಗಳು ಋಷಿಗಳು ಇಲ್ಲಿ ಪರಮಾತ್ಮನ ಪುರುಷರೂಪಗಳು ೩೬೦೦೦ ಸಾವಿರ. ಈ ಪರಮಾತ್ಮನ ರೂಪಗಳು ಪುರುಷನ ಆಯುಷ್ಯಗೆ ೩೬೦೦೦ ಹಗಲಿಗೆ ನಿಯಾಮಕ ರೂಪಗಳು. ಬಲಭಾಗದಿಂದ ಎಡಕ್ಕೆ ಹೋದ ನಾಡಿಗಳು. ೩೬೦೦೦ ಇವು ಅಹಂಕಾರ ತತ್ವಾತ್ಮಕವಾದವು. ಆಲ್ಲಿ ಶೇಷದೇವರು ಗರುಡದೇವರು, ರುದ್ರದೇವರು, ಪರಮಾತ್ಮನ ಆರುಮಂದಿ ಹೆಂಡಂದಿರು ಸೌಪರ್ಣಿ ವಾರುಣೀ ಪಾರ್ವತೀ ಇಷ್ಟು ಜನರು ಇವಕ್ಕೆ ಅಭಿಮಾನಿಗಳು ಋಷಿಗಳಾಗಿದ್ದಾರೆ. ಅಲ್ಲಿ ಪರಮಾತ್ಮನ ಸ್ತ್ರೀ ರೂಪಗಳು ೩೬೦೦೦ ಸಾವಿರ ಆವೆ. ಇವು ಪುರುಷರ ಆಯುಷ್ಯಕ್ಕೆ ೩೬೦೦೦ ಸಾವಿರ ರಾತ್ರಿಗೆ ನಿಯಾಮಕ ರೂಪಗಳು. ಹೀಗೆ ದ್ವಿವಿಧ ಪುರುಷ ಸ್ತ್ರೀ ಪರಮಾತ್ಮನ ರೂಪಗಳು ಬ್ರಹತೀ ಸಹಸ್ರಋಕ್ ೩೬ ಅಕ್ಷರಕ್ಕೆ ವಿಶ್ವಾದಿ ಸಾವಿರದಂತೆ ೩೬೦೦೦ ಸ್ವರ, ೩೬೦೦೦ ವ್ಯಂಜನ. ಈ ಪ್ರಕಾರ ಸ್ವರ ವ್ಯಂಜನ ಸಹ ಎಪ್ಪತ್ತೆರಡು ಸಹಸ್ರದಿಂದ ಪ್ರತಿಪಾದ್ಯ ರೂಪಗಳು. ಇಲ್ಲಿಷ್ಟ ಭಗವದ್ರೂಪಗಳು ಇಡಾನಾಡಿಯಲ್ಲಿ ಋಷಿಗಳಾಗಿ ಅಭಿಮಾನಿಗಳಾಗಿಪ್ಪರು ಬಲ್ಲವರು ನಿರಂತರದಲ್ಲಿ ಈ ರೂಪಗಳ ಸ್ಮರಣಿ ಮಾಡಿದರೆ ಪೂರ್ಣಾಯುಷ್ಯ (ಸ್ಸು) ಹೊಂದುಥಾರೆ.

## ನಾಡಿಗಳಲ್ಲಿದ್ದ ನದಿಗಳ ಕ್ರಮ

ಈ ನಾಡಿಗಳಲ್ಲಿ ೧೨ ನದಿಗಳಿವೆ. ಅಲ್ಲಿ ೧ ಇಡಾ ನಾಡಿಯಲ್ಲಿ ಭಾಗೀರಥಿನದಿ, ೨ ಪಿಂಗಳಾನಾಡಿಯಲ್ಲಿ ಯಮುನೆ, ೩ ಗಾಂಧಾರಿನಾಡಿಯಲ್ಲಿ ಕಾವೇರಿನದಿ, ೪ ಹಸ್ತಿನಾ ನಾಡಿಯಲ್ಲಿ ಸಿಂಧುನದಿ, ೫ ಲಂಬುಸಾನಾಡಿಯಲ್ಲಿ ತಾಮ್ರಪರ್ಣಿ, ೬ ಮಧ್ಯನಾಡಿಯಲ್ಲಿ ಗೋಮತಿ, ೭ ಸರಸ್ವತೀನಾಡಿಯಲ್ಲಿ ಗಂಡಿಕಿನದಿ, ೮ ನಂದನಾನಾಡಿಯಲ್ಲಿ ಕೃಷ್ಣವೇಣಿ, ೯ ವಾರುಣಾ ನಾಡಿಯಲ್ಲಿ ಗೋದಾವರಿನದಿ, ೧೦ ಪೂರ್ಣಾನಾಡಿಯಲ್ಲಿ ಪಯಶ್ವಿನಿ, ೧೧ ಕುಮುದಾನಾಡಿಯಲ್ಲಿ ಸೋಮನಂದಿನಿ, ೧೨ ಶಂಕೀನಿ ನಾಡಿಯಲ್ಲಿ ತಪತಿನದಿ, ಹೀಗೆ ಪರಮಾತ್ಮನ ಆಜ್ಞಾದಿಂದ ನಾಡಿಗಳಲ್ಲಿದ್ದ ನದಿಗಳ ಸ್ಮರಣಿ ಮಾಡಿದರೆ ಸ್ನಾನಮಾಡಿದ ಫಲಾ ಬರುತ್ತದೆ.

## ಈ ದೇಹದಲ್ಲಿದ್ದ ನಾಡಿಗಳ ಕ್ರಮ

ಕಾಲಿನಲ್ಲಿ ಇದ್ದವು ೧೨೦೦೦, ಮಧ್ಯಶರೀರದಲ್ಲಿ ೧೪೦೦೦, ಬಾಹುಗಳಿಗೆ ಹೋಗಿರುವವು ೪೦೦೦, ಶಿರಸ್ಸಿಗೆ ಹೋಗಿರುವವು ೬೦೦೦, ಅಂತು ಎಡಭಾಗದಿಂದ ಬಲಭಾಗಕ್ಕೆ ೩೬೦೦೦, ಬಲಭಾಗದಿಂದ ಎಡಭಾಗಕ್ಕೆ ೩೬೦೦೦ ಈ ಪ್ರಕಾರ ಉಭಯ ಪಾರ್ಶ್ವಕ್ಕೂ ೭೨೦೦೦ ಎಪ್ಪತ್ತೆರಡು ಸಾವಿರ ನಾಡೀ ಪ್ರಕರಣ ಸಮಾಪ್ತ. ಇಂಥ ದೇಹದ

## ಹೃದಯಾಖ್ಯ ಪಟ್ಟಣ ವಿಚಾರ

ಹೃದಯಾಖ್ಯ ಪಟ್ಟಣಕ್ಕೆ ಪರಮಾತ್ಮನ ಅರಮನಿಗೆ ದ್ವಾರಗಳು ಮೂರು ಪ್ರಾಕಾರದಲ್ಲಿ ನಾಲ್ಕು ದಿಕ್ಕಿಲಿ ೧೨ ಬಾಗಿಲುಗಳಿಂದ ಯುಕ್ತವಾಗಿ ಶೋಭಿಸುತಿದೆ. ಊರ್ಧ್ವಕ್ಕೆ ಒಂದು ಬಾಗಿಲು ಅದೆ. ಪರಮಾತ್ಮನ ಅರಮನೆ ಆರಿಂದ ವರ್ಣಿಸಲಿಕ್ಕೆ ಶಕ್ಯ. ದ್ವಾರಗಳಲ್ಲಿದ್ದ ದ್ವಾರಪಾಲಕರ ಸ್ಥಿತಿ ಹೇಳಲ್ಪಡತದೆ. ಪೂರ್ವ ಭಾಗದಲ್ಲಿ ಮೂರು ಪ್ರಾಕಾರಕ್ಕ ಮೂರು ಬಾಗಿಲುಗಳು. ಕೇವಲ ಅಂತರಂಗದೊಳಗೆ ಒಳಬಾಗಿಲಗಳಲ್ಲಿ ರಮಾದೇವೇರು ದ್ವಾರಪಾಲಕರು. ಬಲಪಾರ್ಶ್ವಕ್ಕೆ ಶ್ರೀ, ಎಡಪಾರ್ಶ್ವಕ್ಕೆ

ಭೂದೇವಿ. ಎರಡನೇ ಪ್ರಾಕಾರದಲ್ಲಿ ಮುಖ್ಯ ಪ್ರಾಣದೇವರು ಪ್ರಾಣನಾಮಕ ಚಕ್ಷು ಆದಿತ್ಯ ಎಂದು ನಾಮರೂಪದಿಂದ ದ್ವಾರಪಾಲಕನಾಗಿದ್ದಾನೆ ವಾಮಪಾರ್ಶ್ವಕ್ಕ ದ್ಯು ನಾಮ್ನೀ ಎಂಬೋ ಹೆಸರಿನಿಂದ ಭಾರತೀದೇವೇರು ದ್ವಾರಪಾಲಕರು. ಮೂರನೇ ದ್ವಾರದಲ್ಲಿ ಜಯ ವಿಜಯಾದಿಗಳು. ದಕ್ಷಿಣದಿಕ್ಕಿನ ಮೂರು ಬಾಗಿಲಗಳಲ್ಲಿ ಪ್ರಥಮ ಬಾಗಿಲಗಳಲ್ಲಿ ರಮಾದೇವೇರು. ( ಶ್ರೀ ದೇವಿ, ಭೂ ದೇವಿ ) ದ್ವಿತಿಯ ಬಾಗಿಲಿನಲ್ಲಿ ವ್ಯಾನ ನಾಮಕ ವಾಯುದೇವರು ಶ್ರೋತ್ರಾಭಿದನಾದಂಥಾ ಸೋಮನೆಂಬೋ ಹೆಸರಿನಿಂದ ಇದ್ಧಾರೆ. ವಾಮಪಾರ್ಶ್ವದಲ್ಲಿ ದಿಂಜ್ಞನಾಮಕ ಭಾರತೀ ದೇವೇರು ಇದ್ಧಾರೆ. ತೃತಿಯ ದ್ವಾರದಲ್ಲಿ ಬಲ ಪ್ರಬಲ ನಾಮಕ ದ್ವಾರ ಪಾಲಕರು ಇದ್ದಾರೆ. ಇನ್ನು ಪಶ್ಚಿಮ ಬಾಗಿಲಗಳಲ್ಲಿ ಪ್ರಥಮ ಪ್ರಾಕಾರ ಬಾಗಿಲಗಳಲ್ಲಿ ರಮಾದೇವಿಯರು. ಎರಡನೇ ಬಾಗಿಲಗಳಲ್ಲಿ ಅಪಾನ ನಾಮಕ ವಾಯುದೇವರು ಪಾಯುಸ್ಥ ಅಗ್ನಿ ಎಂಬೋ ಹೆಸರಿನಿಂದ ಬಲ ಭಾಗದಲ್ಲಿ ಇದ್ಧಾರೆ. ವಾಮ ಪಾರ್ಶ್ವದಲ್ಲಿ ಭಾರತೀ ದೇವಿಯರು ಪೃಥ್ವಿ ನಾಮದಿಂದ ಇದ್ಧಾಳೆ. ತೃತೀಯ ಬಾಗಿಲದಲ್ಲಿ ಕುಮುದ ಕುಮುದಾಕ್ಷರು ಇದ್ಘಾರೆ. ಉತ್ತರ ದಿಕ್ಕಿನ ಮೂರು ಬಾಗಿಲಗಳಲ್ಲಿ ಪ್ರಥಮ ಬಾಗಿಲಲ್ಲಿ ರಮಾದೇವೇರು ( ಶ್ರೀ ಭೂ ರೂಪ ) ಇದ್ಧಾರೆ. ಎರಡನೇ ಬಾಗಿಲಿನಲ್ಲಿ ಸಮಾನನಾಮಕ ವಾಯುದೇವರು ಮನಸ್ಸು ಇಂದ್ರನಿಂದ ಕೂಡಿ, ಮನಃ ಇಂದ್ರನೆಂಬೋ ಹೆಸರಿನಿಂದ ಬಲಭಾಗದಲ್ಲಿ ಇದ್ದಾರೆ. ವಾಮಪಾರ್ಶ್ವದಲ್ಲಿ ವಿದ್ಯುನ್ನಾಮ್ನಿ ಭಾರತೀ ದೇವೇರು ತೃತೀಯ ಬಾಗಿಲಲ್ಲಿ ನಂದ ಸುನಂದನರು. ಊರ್ಧ್ವಭಾಗದಲ್ಲಿ ಒಂದೇ ದ್ವಾರವಿದೆ. ಅಲ್ಲಿ ಆಕಾಶನಾಮದಿಂದ ರಮಾದೇವೇರು ದ್ವಾರಪಾಲಕರು ಬಲಪಾರ್ಶ್ವಕ್ಕೆ ಇದ್ಧಾರೆ. ಎಡ ಪಾರ್ಶ್ವಕ್ಕೆ ಉದಾನನಾಮಕ ವಾಯುದೇವರು ವಾಂಙ್ಮನಾಮಕಳಾದ ಭಾರತೀದೇವೇರು ಹೀಗೆ ಉಭಯತರು ಇದ್ದಾರೆ. ಜಯ ವಿಜಯಾದಿ ದ್ವಾರಪಾಲಕರಿಲ್ಲ. ಹೀಗೆ ಹದಿಮೂರು ದ್ವಾರಗಳಿಂದ ಯುಕ್ತವಾದಂಥಾ ಪಟ್ಟಣ ಮಧ್ಯದಲ್ಲಿ ಪರಬ್ರಹ್ಮ ತನಗೆ ಇರಲಿಕ್ಕೆ ಉಚಿತವಾದಂಥ ರಮ್ಯವಾಗಿ ಶೋಭಿಸುವಂಥ ಸುಷುಮ್ನಾನಾಡಿ ಯೇವೆ ತನಗೆ ಸಿಂಹಾಸನ ಯೋಗ್ಯವಾದ ಮಂದಿರವೆಂದು ಸ್ವೀಕರಿಸಿದ್ಧಾನೆ. ಸುಷುಮ್ನಾನಾಡಿ

ಮಧ್ಯದಲ್ಲಿ ದಹರಾಖ್ಯ ಆಕಾಶದಲ್ಲಿ ಹೃದಯ ಕರ್ಣಿಕ ತಳದಲ್ಲಿ ರಥ ಮಧ್ಯದಲ್ಲಿ ಇದ್ದಂಥಾ ಪರಮಾತ್ಮನ ಧ್ಯಾನ ಮಾಡಬೇಕು. ರಥ ಶೃಂಗಾರ ಪರಿವಾರ ಸಹಿತನಾದಂಥ ಪರಮಾತ್ಮ ಇಹೋಕ್ರಮ. ಶಕ್ತ್ಯಾನುಸಾರ ಪರಮಾತ್ಮ ಪ್ರೇರಿಸಿದಷ್ಟು ಸಂಕೋಚದಿಂದ ಹೇಳಲ್ಪಡುತ್ತದೆ.

## ಹೃತ್ಕಮಲ ಕರ್ಣಿಕಾ ವಿಚಾರ

ಪದ್ಮದಲ್ಲಿ ಶ್ರೀ ದೇವೇರನ್ನ ತಿಳಿಯಬೇಕು. ನಾಳದಲ್ಲಿ ಭೂ ದೇವೇರನ್ನ ತಿಳಿಯಬೇಕು. ಮೂಲದಲ್ಲಿ ದುರ್ಗಾ ದೇವೇರನ್ನ ತಿಳಿಯಬೇಕು. ಹೃದಯಪದ್ಮ ಕರ್ಣಿಕಾಗ್ರಸ್ಥನಾದಂಥಾ ಪರಮಾತ್ಮ ಸರ್ವ ಪ್ರಾಣಿಗಳಲ್ಲಿ ಅವರವರ ಅಂಗುಟ ಪರಿಮಿತನಾಗಿದ್ದಾನೆ. ಈತನೇ ಅಗ್ರೇಶ, ಜೀವರಿಗೆ ಸುಷುಪ್ತಿ ಕೊಡತಕ್ಕಂಥವ, ಈತನೇ ಪ್ರಾದೇಶ ಮೂರ್ತಿ, ಪ್ರಾದೇಶ ಸಮೇತನಾಗಿ ಇದ್ದಕಾರಣ ಈತನೇ ಜೀವಾಧಾರ ದೇಹಾಧಾರನಾದ ಪರಮ ಪುರುಷನಾಮಕನು, ಕರ್ಣಿಕಾ ಮೂಲದಲ್ಲಿದ್ದ ಪರಮಾತ್ಮ ಈತನೇ ಅಂಗುಷ್ಟಾಗ್ರ ಮೂರುತಿ ವಿಷ್ಣುನಾಮಕ ಈತನೇ, ಮೂಲೇಶ ಈತನೇ, ವಿಜ್ಞಾನಾತ್ಮನೆಂದು ಜ್ಞಾನಿಗಳು ಹೇಳೋಕ್ರಮ. ಈ ಪರ-ಮಾತ್ಮನ ಮೂರು ರೂಪಗಳು ಅಗ್ರೇಶ, ಮೂಲೇಶ, ಪ್ರಾದೇಶನೆಂದು ಕರಸಿಕೊಂಡು ಹೃದಯದಲ್ಲಿರುಥಾನೆ. ಮೂಲೇಶನ ಪಾದಾಶ್ರ್ಯಸಿಕೊಂಡು ಸಸ್ಮುಖವುಳ್ಳವನಾಗಿ ಕೃತಾಂಜಲೀ ಪುಟನಾಗಿ ಮುಖ್ಯ ಪ್ರಾಣದೇವರು ನಿತ್ಯದಲ್ಲಿ ಇರುಥಾರೆ. ಆ ಮುಖ್ಯ ಪ್ರಾಣದೇವರಿಗೆ ನಿಯಾಮಕ ಪರಮಾತ್ಮನೇ "ಲಾಳೂಕ" ಯೆಂದು ತಿಳಿಯಬೇಕು. ಮತ್ತು ಆ ಪರಮಾತ್ಮನೇ ಅಪರಾಜಿತನಾವ ಪ್ರಯುಕ್ತ ಅಪರಾಜಿತನೆಂದು ಕರೆಸುಥಾನೆ. ಮಹದೈಶ್ವರ್ಯವುಳ್ಳ ಪರಮಾತ್ಮನಾದಕಾರಣ, ಪುಪಾಸನೆ ಮಾಡುದಂಥಾವರು ಇದೇ ವೈಕುಂಠ ಎಂದು ತಿಳಿಥಾರೆ.

## ಹಂಸಮಂತ್ರ ಜಪಕ್ರಮ

ಇಲ್ಲಿ ಮುಖ್ಯ ಪ್ರಾಣದೇವರು ಶ್ವಾಸರೂಪದಿಂದ ಸರ್ವದಾ ಹಂಸ ನಾಮಕ ಮಂತ್ರ ಜಪಿಸುಥಾರೆ. ಪರಮಾತ್ಮನ ಸಂತೋಷಾರ್ಥವಾಗಿ ಜೀವರಿಂದಲ್ಲ್ಯೂ ಮಾಡಿಸುಥಾರೆ. ನಿತ್ಯದಲ್ಲಿ ೨೧೬೦೦ ಇಪ್ಪತ್ತೊಂದು

ಸಾವಿರ ಆರುನೂರು ಪ್ರಕಾರ ಜನರು ನಿತ್ಯದಲ್ಲಿ ಇದು ತಿಳಿದು, ಮಂತ್ರಾರ್ಘ್ಯಕೊಟ್ಟು, ನಿರ್ಮಲಾಂತಃಕರಣಯುಕ್ತರಾಗಿ, ಮುಖ್ಯ ಪ್ರಾಣ ದೇವರು ಮಾಡಿಸಿದಂಥಾ ಜಪವೇ ಧ್ಯಾನಶ್ಲೋಕ ಪುರಸ್ಸರ ಸಮರ್ಪಣ ಮಾಡಿದರೆ ಆ ಫಲ ಇವಗೆ ಕೊಡುಥಾರೆ.

## ಜೀವನ ಪರಿಮಿತಿ ಜೀವನಂಗಳಲ್ಲಿ ಇದ್ದ ಹರಿರೂಪಗಳು

ಅಶ್ವ ಬಾಲಾಗ್ರ ಹತ್ತು ಸಹಸ್ರ ಭಾಗಕ್ಕೆ ಏಕದೇಶನಾದ ಜೀವ. ತನಗಿದ್ದ ಶರೀರದಿಂದ ಯುಕ್ತನಾಗಿ ಮುಖ್ಯ ಪ್ರಾಣದೇವರ ಪಾದಾಶ್ರಯ ಮಾಡಿಕೊಂಡು ಇರಥಾನೆ. ಮುಖ್ಯಪ್ರಾಣನಿಂದ ಪ್ರೇರಿಸಿಕೊಂಡು ಯಥಾ ಶಕ್ತಿ ಕರ್ಮಮಾಡಥಾನೆ. ಜೀವನಲ್ಲಿ ಪರಮಾತ್ಮ ಇದ್ದಪ್ರಕಾರ,

ಪರಮಾತ್ಮನ ಅಂಗಗಳು ಜೀವನ ಅಂಗಗಳಲ್ಲಿ ವ್ಯಾಪ್ತವಾಗಿಅವೆ ಈ ಜೀವಗೆ ಬಿಂಬನಾದ ಪರಮಾತ್ಮನ ಅಂಗ ಹೇಳಿ, ತತ್ಪ್ರತಿಬಿಂಬ ಜೀವನೆಂದು ಹೇಳಲ್ಪಡುತ್ತದೆ. ವಾಸುದೇವ ಪರಮಾತ್ಮನೇ ತನಗ ಶಿರಸ್ಸು ಜೀವನ ಶಿರಸ್ಸಿಗೆ ಆಧಾರ. ವಾಮ ಪಕ್ಷ ಅನಿರುದ್ಧ, ದಕ್ಷಣ ಪಕ್ಷ ಪ್ರದ್ಯುಮ್ನನಾಮಕ ಪರಮಾತ್ಮ ಜೀವನ ಪಕ್ಷಕಾಧಾರ. ಸಂಕರುಷಣ ನಾಮಕ ಪರಮಾತ್ಮನೇ ತನ್ನ ಅಂಘ್ರಿ ಜೀವಾಂಘ್ರಿಗಾಧಾರ. ನಾರಾಯಣನಾಮಕ ಪರಮಾತ್ಮನೇ ಹರಿಯ ಮಧ್ಯಾಂಗ. ಜೀವನ ಮಧ್ಯಾಂಗಕ್ಕಾಧಾರ. " ವಿಷ್ಣುರ್ವಾ ಭಾರ್ಗವೋ ರಾಮೋ ಜೀವವಾಚಿ ಪ್ರತಿಷ್ಟಿತ: " ಭಾರ್ಗವರಾಮನೇ ತನ್ನ ವಾಕು ಜೀವನ ವಾಕ್ಯದಲ್ಲಿದ್ದಾನೆ. ನರಸಿಂಹ ನಾಮಕ ಪರಮಾತ್ಮನೇ ಜೀವನ ಪ್ರಾಣಕ್ಕೆ (ಘ್ರಾಣಕ್ಕೆ) ಆಧಾರ. ಬಿಂಬ ಪ್ರಾಣಾ (ಘ್ರಾಣಾ) ಧಾರ ಕಪಿಲ ನಾಮಕ ಪರಮಾತ್ಮ ಜೀವನ ಕಣ್ಣಿಗಾಧಾರ. ಜೀವಾಭಿಮಾನಿ ಶೇಷನು. ಆತನಲ್ಲಿ ಸಂಕರ್ಷಣ ನಾಮಕ ಪರಮಾತ್ಮನು.

ಇಂಥಾ ಜೀವನನ್ನು ಅನಿರುದ್ಧಾದಿ ನಾಲ್ಕು ಕೋಶದೊಳಗೆ ಅನಾದಿಯಾದಂಥಾ ಷೋಡಶ ಕಳಾ ಪೇತವಾದಂಥ ಅಶಾಶ್ವಿತವಾದಂಥ ಲಿಂಗದೇಹದಿಂದ ಆವರಿಸಿಕೊಂಡು, ಬಾಧಿತನಾಗಿ ತನ್ನ ಸ್ವರೂಪಾನಂದ

ಕಾಣದಲೇವೆ ಪೀಡಿತನಾಗಿದ್ದಾನೆ. ಇದರೊಳಗೆ ದೇವತೆಗಳಾದಂಥಾ ಜೀವರು ತಾವು ಅಣುರೂಪಗಳಾದ ಕಾಲಕ್ಕೂ ಪರಮಾತ್ಮನ ಸಾಮರ್ಥ್ಯದಿಂದ ಮಹತ್ತರವಾದ ಜಗತ್ತು ಕಾಷ್ಟವು ಅಗ್ನಿ ವ್ಯಾಪಿಸಿದಂತೆ ತಮ್ಮ ಸ್ವರೂಪಅಂಶದಿಂದಲ್ಲೇವೇ ವ್ಯಾಪ್ತರಾಗಿರುಥಾರೆ. "ದೇವಾನಾಂ ಅಂಶತೋ ವ್ಯಾಪ್ತಿಃ" ಎಂಬೋ ಪ್ರಮಾಣಾನುಸಾರ ನಿರಂಶ ಜೀವರಿಗೆ ತಮ್ಮ ಸ್ವದೇಹದಲ್ಲಿ ವ್ಯಾಪ್ತಿ, ದೀವಿಗಿ ಪ್ರಕಾಶ ತನ್ನ ಮನಿಯೊಳಗೆ ಇರೋವಾದೆಯಲ್ಲಿ ತಮ್ಮ ಜ್ಞಾನದಿಂದ ಪ್ರಕಾಶರಾಗಿರುಥಾರೆ. ಬಾಹ್ಯ ಜಡೇಂದ್ರಿಯಗಳಲ್ಲಿ ವ್ಯಾಪಿಸಿ, ಬಾಹ್ಯ ವಿಷಯಜ್ಞಾನವುಳ್ಳವರಾಗಿರುಥಾರೆ. ಮುಕ್ತಿ ಆಗೋತನಕ ಸಾಕ್ಷಾತ್ ಸ್ವರೂಪೇಂದ್ರಿಯ ವ್ಯಾಪಾರ ಸ್ವಾಧೀನಕ್ಕೆ ಬಾರಥಾಂಗೆ ಪ್ರಕೃತಿಬಂಧ ಪ್ರತಿಬಂಧಕ ಇದ್ದಕಾರಣ ಬಾಹ್ಯ ಜಡೇಂದ್ರಿಯ ಸಂಬಂಧದಿಂದಲೇ ಜ್ಞಾನವುಳ್ಳವನಾಗಿ, ಜಡವಾದ ಶರೀರದಿಂದಲೇ ಅಹಂಭಾವ ಮಾಡಿ, ಪುನಃ ಪುನಃ ಕುತ್ಸಿತ ಜನ್ಮ ನರಕಾದ್ಯನರ್ಥವನ್ನು ಐದುಥಾನೆ.

## ಜೀವನ ವಿಷಯುಧರ್ಮ

ತನಗೆ ಅಹಂಭಾವ ತಂದು ಕೊಟ್ಟು ಕೆಡಿಸುವಂಥ ಶತ್ರುಭೂತವಾದಂಥಾ ಶರೀರಗೋಸ್ಕರ ಶರೀರ ಸಂಬಂಧಿಕರಗೋಸ್ಕರ ಹೇಯಸುಖಾಪೇಕ್ಷಿಸಿ. ಕಾಮಕ್ರೋಧಾದಿಗಳೆಂಬ ಘೋರಾರಣ್ಯದಲ್ಲಿ ಶಿಕ್ಕವನಾಗಿ ತತ್ಸ್ವಾರ್ಥವಾಗಿ ಕೊಲ್ಲುವಂಥಾ ಕಳ್ಳರ ಸಂಗದೋಷಾದಿಯಲ್ಲಿದ್ದು ದುಷ್ಕರ್ಮಾದಿಗಳಿಂದ ಸಂಗಮಾಡಿ ಬಗೆ ಬಗೆ ವಿಚಿತ್ರತರವಾಗಿ ನರಕಾದ್ಯನರ್ಥವನ್ನು ಐದುಥಾನೆ. ಇವಗೆ ಅಹಂಭಾವ ತಂದುಕೊಟ್ಟು ಕೆಡಿಸುವಂಥಾ ಭಾವಬಿಟ್ಟು ಸಜ್ಜನರ ಸಹವಾಸಮಾಡಿ ಪರಮಾತ್ಮನೇ ಸರ್ವಕರ್ತ ಸರ್ವೋತ್ತಮ ಸ್ವಾತಂತ್ರ ದೋಷದೂರ ಗುಣ ಪರಿಪೂರ್ಣನೆಂದು ತಿಳಿದು, ತದೇಕನಿಷ್ಠನಾದರೇ ಈ ಬಂಧಕ ಪರಿಹರಿಸಿ ಜೀವನ ಜ್ಞಾನಾನಂದ ವ್ಯಕ್ತಮಾಡಥಾನೆ. ಲೋಕರು ಕೆಡಲಿಕ್ಕೆ ಅಹಂ ಭಾವವೇ ಪ್ರಥಮ ಪ್ರಬಲ ಶತ್ರು. ಲೋಕರು ಕಡೆ ಬೀಳಲಿಕ್ಕ ಪರಮಾತ್ಮನೇ ಸರ್ವ ಕರ್ತೃ. ನಿರ್ಲಿಪ್ತನೆಂಬೊ ಚಿಂತನೆ ಪ್ರಥಮ. ಅತ್ಯಂತ ಆಪ್ತರ ಮಿತ್ರನು. ಜೀವನ ಹೃದಯದಲ್ಲಿ ಶ್ವೇತಪತ್ರ ಅಷ್ಟದಳವುಳ್ಳ ಕರ್ಣಿಕಾಮಧ್ಯದಲ್ಲಿ ನಾರಾ

ಯಣನಾಮಕ ಪರಮಾತ್ಮ ಆತ್ಮಾ ಎಂಬೋ ಹೆಸರಿನಲ್ಲಿ ಇದ್ದಾನೆ. ಶ್ವೇತವರ್ಣನಾಗಿದ್ದಾನೆ. ಜೀವನ ಹೃದಯ ಮಂಟಪದಲ್ಲಿ ಶ್ಯಾಮವರ್ಣ ದಿಂದ ಹೃದಯ ನಾಮಕನೆಂಬೋ ಹೆಸರು ಧರಿಸಿ ನರಸಿಂಹನಾಮಕ ಪರಮಾತ್ಮ ಇದ್ದಾನೆ. ಸಮಗ್ರ ಜೀವನ ಶರೀರ ವ್ಯಾಪಿಸಿ, ವ್ಯಾಪ್ತನಾಗಿ ಅನಿರುದ್ಧ ನಾಮಕ ಪರಮಾತ್ಮ ಇದ್ದಾನೆ. ಜೀವನಾಮಕ ಹೆಸರಿನಲ್ಲಿ ಇದ್ದಾನೆ. ಅನಿರುದ್ಧ ನಾಮಕ ಪರಮಾತ್ಮನೆ ಬಹು ನಾಮಗಳಿಂದ ಕರೆಸಿಕೊಳ್ಳುಥಾನೆಂದು ಹೇಳಥಾರೆ. ಸರ್ವ ಶರೀರದಲ್ಲಿದ್ದ ಪ್ರಯುಕ್ತ ಶರೀರವೆಂಬೋ ಹೆಸರು. ಪರಮಾತ್ಮ ಸರ್ವರ ಅಹಂಕಾರಕ್ಕ ನಿಯಾಮಕನಾದಕಾರಣ ಅಹಂಕಾರವೆಂದು ಕರೆಸುಥಾನೆ. ಜೀವಾಂತರ ನಿಯಾಮಕನಾದ ಕಾರಣ ಅಹಂಕಾರನೆಂದು ಕರಸುಥಾನೆ. ಅಂತರಾತ್ಮನೆಂದು ಕರೆಸುಥಾನೆ. ಈ ಪರಮಾತ್ಮನೇ ಸರ್ವರಿಂದ ಉಪಾಸ್ಯನಾಗಿ ಇಷ್ಟನಾಗಿದ್ದಾನೆ. ಮಚ್ಛಾದಿ ಅವತಾರಗಳವೆ. ಇಲ್ಲಿ ಪರಿಯಂತರವೂ ಹೇಳಿದ ಭಗವದ್ರೂಪಗಳು.

ಮುಂದೆ ಗುರುಗಳು ಪ್ರೇರಿಸಿಥಾಂಗೆ ಬರೆವಂಥಾ ಸಮಸ್ತ ಭಗವದ್ರೂಪಗಳು. ಜೀವಾಂತರ್ಯಾಮಿಯಲ್ಲಿ ನಿರ್ಧಾರವಾಗಿ ಒಬ್ಬ ಬಿಂಬನಲ್ಲೇ ಐಕ್ಯ ತಿಳಿಯಬೇಕು. ಒಬ್ಬನೇ ಅನಂತಾ ಎಂಬೋಣವೇ ಅದು ಪರಮಾತ್ಮಗೆ ಪರಮ ಅರ್ಚನೆ. ನಿತ್ಯರೂಪಗಳು ಅನಂತ ಒಬ್ಬನೇ ನಿಶ್ಚೈಸು ಒಬ್ಬಗೆ ಇದು ಪರಮಾತ್ಮಗೆ ಐಶ್ವರ್ಯದಿಂಪಕೂಡತದೆ. ನಮಗೆ ತಿಳಿಯದು

**ಮುಂದೆ ಪರಮಾತ್ಮ ಸೃಷ್ಟಿ ಮಾಡಬೇಕಾದರೆ,** ಅತಿ ಸೂಕ್ಷ್ಮ ಪ್ರಕೃತಿ ಪರಮಾಣು ರೂಪಗಳಿಂದ ಗುಣತ್ರಯಾಭಿಮಾನಿಗಳನ್ನು ಮಾಡಿ, ಗುಣತ್ರಯಾವರಣಮಾಡಿ, ಅಲ್ಲಿ ರಮಾದೇವೇರು ಆ ಗುಣತ್ರಯದಿಂದ ಬ್ರಹ್ಮದೇವರಿಗೆ ಮಹತತ್ವಾತ್ಮಕ ಶರೀರ ಮಾಡಿಕೊಡಥಾರೆ. ಮಹತತ್ವಾತ್ಮಕವಾದ ಬ್ರಹ್ಮದೇವರ ಶರೀರ ದಾವ ಗುಣವಿಕಾರವೆಂದರೆ

## ಗುಣತ್ರಯ ವಿವರ

ಮೂರು ತತ್ವದಲ್ಲಿ ಆವಾಸ ಎಷ್ಟು ಜನರಿಗೆ ಅಂದರೆ ಗುಣತ್ರಯ ಒಂಭತ್ತು ಪ್ರಕಾರ ಜ್ಞಾನಿಗಳು ಹೇಳುಥಾರೆ. ಸತ್ವ ಸತ್ವ, ಸತ್ವರಜ,

ಸತ್ವ ತಮ, ಈ ಮೂರು ಗುಣಕ್ಕೆ ಸತ್ವಗುಣ, ರಜಃಸತ್ವ, ರಜೋರಜ ರಜಸ್ತಮ, ಈ ಮೂರುಗುಣಕ್ಕೆ ರಜೋಗುಣ, ತಮಃಸತ್ವ, ತಮೋರಜ ತಮಃತಮಃ ಈ ಮೂರು ಗುಣಕ್ಕೆ ತಮೋಗುಣ. ಈ ಪ್ರಕಾರ ತ್ರಿಗುಣ ಗಳೊಳಗೆ ಶುದ್ಧ ಸತ್ವ ಸೃಷ್ಟಿಗೆ ಉಪಾದಾನವಿಲ್ಲೆಂದು ಜ್ಞಾನಿಗಳು ಹೇಳು ಥಾರೆ. ಉಳದ ಎಂಟುಬಗೆ ಗುಣದಿಂದ ಸೃಷ್ಟಿ ಹೇಳತಕ್ಕದ್ದು.

ಮೋಕ್ಷದಲ್ಲಿ ಇಹೋ **ಸತ್ವಗುಣ ಸ್ವಭಾವ** ಮುಕ್ತರಿಗೆ ಬಯಸಿದ ಅಭೀಷ್ಟ ಸಲಿಸಬೇಕು. ಅವರ ಮನಸ್ಸಿಗೆ ವಿಕಾರ ಹುಟ್ಟಿಸಲಿಕ್ಕಿಲ್ಲ ತನ್ನ ಭೋಗದಲ್ಲಿ ರತಿ ಹುಟ್ಟಿಸಿ ಪರಮಾತ್ಮನ ರತಿ ತಪ್ಪಿಸಲಿಕ್ಕಿಲ್ಲ. ಬ್ಯಾಡ ವೆಂಬೋ ಇಚ್ಛೆಯಾದರೆ ತತ್‌ಕ್ಷಣದಲ್ಲಿ ಕಡಿಗ್ಯಾಗಬೇಕು. ಇದು ಸತ್ವ ಗುಣದ ಸ್ವಭಾವ ಶ್ರೀ ಪರಮಾತ್ಮ ನಡಸಥಾನೆ.

## ಸತ್ವ ರಜೋಗುಣದ ಸೃಷ್ಟಿ ಬ್ರಹ್ಮದೇವರದು

ಸತ್ವರಜೋಗುಣದಿಂದ ಸೃಷ್ಟಿ ಬ್ರಹ್ಮದೇವರಿಗೆ ವಾಯು ದೇವರಿಗೆ ತದ್ಭಾರ್ಯರಿಗೆ ಸತ್ವ ರಜೋಗುಣ ವಿಕಾರವೇ ಇದೇ ಮಹತತ್ವವಾಗುತದೆ. ಇದೇ ಮಹತತ್ವವೇ ಬ್ರಹ್ಮದೇವರ ಶರೀರ. ಇದೇ ಮಹತತ್ವವೇ ವಾಯು ದೇವರ ಸರಸ್ವತೀ ದೇವೇರ ಭಾರತೀ ದೇವೇರ ಶರೀರವಾಗಿದೆ. ಈ ತತ್ವ ದಲ್ಲಿ ಅಭಿಮಾನಿಗಳು ಇದರೊಳಗೆ ಬ್ರಹ್ಮದೇವರು ಮುಖ್ಯಾಭಿಮಾನಿ. ಬ್ರಹ್ಮದೇವರಿಗೆ ಮಹತ್ಮಿ ಏನಂದರೆ ಉಪದೇಶವಿಲ್ಲದಲೇವೆ ಅನಂತಾ ನಂತ ವೇದ ಪ್ರತಿಪಾದ್ಯನಾದಂಥಾ ಪರಮಾತ್ಮನ ಗುಣಗಳನ್ನು ಅನಾ ಯಾಸ ತಿಳಿಯೋಣ. ಅತನು ತಿಳಿದ ತರುವಾಯದಲ್ಲಿ ತಿಳಿದಪ್ರಕಾರ ಅನಂತಾನಂತ ವೇದಗಳ ಸಮ್ಮತಿಯಾಗಿ ಕಾಂಬೋಣ. ತಿಳಿದಪ್ರಕಾರ ಪರಮಾತ್ಮನ ಸರ್ವ ಗುಣೋಪಾಸನೆ ಮಾಡಿ, ಪರಮಾತ್ಮನ ಪ್ರತ್ಯಕ್ಷ ಕರಿಸಿಕೊಂಬೋಣ ಆತನ ಗುಣ ಸಮೂಹಗಳನ್ನು ಧ್ಯಾನಮಾಡಿಕೊಂಡು ಅಲ್ಲೇ ಮಗ್ನನಾಗಿಹೋಣ, ಪರಮಾತ್ಮನ ಪ್ರೀತ್ಯರ್ಥವಾಗಿ ಸಮಗ್ರ ಜಗತ್ಸರ್ಜನೆ ಮಾಡೋಣ. ದುಷ್ಟರು ತಪಸ್ಸು ಮಾಡಿದರೆ ಉತ್ತರೋ ತ್ತರ ಅಕ್ಷೇಮಾರ್ಥವಾಗಿ ಅವರಿಗೆ ವರಗಳ ಕೊಡೋಣ. ಅಶೇಷ

ತನ್ನಿಂದ ಸೃಷ್ಟರಾಗುವ ಜಗತ್ತಿನ ಚಿತ್ತಕ್ಕೆ ಅಭಿಮಾನಿಯಾಗಿಹೋಣ, ಇ೨ ಲಕ್ಷಣದಿಂದ ಪೂರ್ಣವಾಗಿಹೋಣ. ದುಷ್ಟ ಕಲ್ಯಾದಿಗಳ ಬಾಧೆ ದಾವ ರೀತಿಯಿಂದಾದರೂ ಕಾಣದೇ ಇಹೋಣ. ತನ್ನ ಸರಿ ಜೀವರ ಮಧ್ಯದಲ್ಲಿ ದಾವ ವಿಷಯದಲ್ಲೆ ದಾರೂ ಇಲ್ಲದೇ ಇಹೋಣ. ಇದು ಬ್ರಹ್ಮದೇವರ ಸ್ವಭಾವ. ಸತ್ವ ಸತ್ವಕ್ಕ ಸತ್ವರಜೋಗುಣಕ್ಕ ಏನು ವೈಷಮ್ಯವೆಂದರೆ, ಬ್ಯಾಡಾ ಎಂದರೆ ಸತ್ವ ಸತ್ವಕ್ಕ ಹೋಗತದೆ. ಇದು ಬ್ರಹ್ಮದೇವರ ನೂರು ವರುಷ ಪರಿಯಂತರವೂ ಹೋಗದೇ ಇರುತ್ತದೆ. ಇದು ಬ್ರಹ್ಮದೇವರ ೧೦೦ ವರ್ಷ ವಿಶೇಷ ತಿಳಿಯತಕ್ಕದ್ದು ಬ್ರಹ್ಮದೇವರಿಗೆ ಮಹ ತತ್ವಕ್ಕ ಸೃಷ್ಟಿಯಲ್ಲಿ ಜೀವರಮಧ್ಯದಲ್ಲಿ ದಾರೂ ಸರಿ ಇಲ್ಲದಕಾರಣ ಮಹತತ್ವಾಭಿಮಾನಿ ಎಂಬ ಹೆಸರು. ಚಿತ್ತಾಭಿಮಾನಿಗಳು ಬಹು ದೇವತೆಗಳು ಇರಲಿಕ್ಕೆ ಬ್ರಹ್ಮದೇವರಿಗೆ ಇದು ವೈಷಮ್ಯ ಏನೆಂದರೆ, ಮ್ಯಾಲೆ ಹುತ್ತು ಬೆಳೆವರೂ ಶರೀರದ ವರವು ಬಿಟ್ಟು ಪರಮಾತ್ಮನಲ್ಲಿ ಚಿತ್ತವಿಟ್ಟು ಚಲಸದೇ ಸಮಾಧಿಗೆ ಕುಳಿತು ಅನ್ಯವಸ್ತು ಹೇಯವೆಂದು ಪರಮಾತ್ಮನಲ್ಲೇಕಮತ್ತವಾಗಿ ತಿರಗದ ಚಿತ್ತ ದಾವುದೋ ಅದಕ್ಕ ಬ್ರಹ್ಮದೇವರು ಅಭಿಮಾನಿ. ಇನ್ನೊಬ್ಬರಿಗೆ ಇದು ಸರ್ವಥಾ ಕೂಡದು. ಈ ಪದವಿಗೆ ಬ್ರ ಹ್ಮ ದೇ ವ ರಿ ಗೆ ಸುಲಭದಿಂದ ಬಂತೆ? ಹ್ಯಾಂಗೆಂದರೆ ೧೦೦ ಕಲ್ಪ ಪರಮಾತ್ಮನ ವಿಶೇಷಾಪರೋಕ್ಷಾರ್ಥವಾಗಿ ಸಾಧನಮಾಡಿ, ಅಪರೋಕ್ಷಾನಂತರ ೯೮ ಕಲ್ಪದಲ್ಲಿ ವಿಚಿತ್ರ ಸಾಧನ ಮಾಡಿ ಪರಮಾತ್ಮನ ಪ್ರೀತಿ ಬಡಿಸಿ ಒಂದು ಕಲ್ಪಕ್ಕ ವಾ ಯು ದೇ ವ ರಾ ಗಿ ವಿಜ್ಞಾನ ತತ್ವಾಭಿಮಾನಿಯಾಗಿ ಸರ್ವ ಪ್ರಾಣಿಗಳಲ್ಲಿದ್ದು ಪರಮಾತ್ಮನ ಪ್ರೀತಿಬಡಿಸಿ ಮೂರಾವತಾರ ಮೊದಲಾಗಿ ಅನಂತ ಅವತಾರದಿಂದಲ್ಲ್ಯೂ ಪರಮಾತ್ಮನ ಪ್ರೀತಿ ಬಡಿಸಿ ಕಡೇಲಿ ೨೦೦ ನೇ ಕಲ್ಪದಲ್ಲಿ ಐದಿದ ಸಾಮ್ರಾಜ್ಯವಿದು. ಈತನ ಸಾಮ್ರಾಜ್ಯ ಎಣಸಲಿಕ್ಕ ರುದ್ರಾದಿಗಳಿಂದ ಶಕ್ಯವಲ್ಲ. ಇದು ಬ್ರಹ್ಮದೇವರ ಪ್ರಕರ್ಣ

## ವಾಯುದೇವರ ಪ್ರಕರ್ಣ

ಸತ್ವರಜೋಗುಣ ವಿಕಾರವೇ ವಾ ಯು ದೇ ವ ರ ಶರೀರ. ಇದು ಮಹತತ್ವವಾದಕಾಲಕ್ಕೂ ವಿಜ್ಞಾನತತ್ವಾಯೆಂತ ಕರಸುತದೆ. ಆ ತತ್ವಕ್ಕ

ಈ ತತ್ವಕ್ಕೆ ಏನು ಹೆಚ್ಚುಕಡಿಮಿ ಎಂದರೆ, ಸ್ಪಷ್ಟತ್ವದಲ್ಲಿ ಮಾತ್ರ ಭೇದ ಒಡಂಬಡತಕ್ಕದ್ದು. ಸ್ಪಷ್ಟತ್ವಭೇದ ಎಂಬರೆ ರಾತ್ರಿಲಿ ಬಹುದೀಪದ ಬೆಳಕಿಲಿ ಪದಾರ್ಥ ನೋಡಿದಹಾಗೆ ವಾಯುದೇವರು ಪರಮಾತ್ಮನ ಗುಣ ಕಾಂಬೋಣ ರೂಪ ನೋಡೋಣ, ಬ್ರಹ್ಮದೇವರು ಬೆಳಗಿದಮ್ಯಾಲೆ ಪದಾರ್ಥ ಕಾಂಬೋಣ ಹ್ಯಾಗೋ ಹಾಗೆ ಪರಮಾತ್ಮನ ಗುಣರೂಪ ಕ್ರೀಯಾ ಅನಂತ ವೇದಕ್ಕ ಸಮ್ಮತಿಯಾಗಿ ಪೂರ್ವಪಲ್ಲಿ ಪರಮಾತ್ಮನ ಗುಣರೂಪಕ್ರಿಯಗಳನ್ನು ಅನಂತ ವೇದಕ್ಕ ಸಮ್ಮತಿಯಾಗಿ ಕಾಣಥಾರೆ. ಹಾಗೆ ವಾಯುದೇವರು ವೇದಕ್ಕ ಸಮ್ಮತಿಯಾಗಿ ಪೂರ್ವದಲ್ಲಿ ಪರಮಾತ್ಮನ ಗುಣಗಳನ್ನು ಕಾಣುತ್ತಾನಾದ ಪ್ರಯುಕ್ತ ವಿಜ್ಞಾನ ತತ್ವಾಭಿಮಾನಿಗಳು. ಈ ವಾಯುದೇವರು ಸರ್ವ ಪ್ರಾಣಿಗಳಿಗೆ ಚೇಷ್ಟಪ್ರದರು. ಪರಮಾತ್ಮನ ದೃಢತರ ಜ್ಞಾನ ಸಂಪಾದಿಸಿ ಬಾಹ್ಯ ಪದಾರ್ಥದಲ್ಲಿ ದೃಷ್ಟಿ ಇಡದಲೇ ಮದೋನ್ಮತ್ತರೋಪಾದಿಯಲ್ಲಿ ಸಂಚರಿಸುತ್ತಾ ಅವಧೂತರಾಗಿ ದಾರು ಇರುಥಾರೆ ಅವರೇ ವಿಜ್ಞಾನಿಗಳು. ಇಂಥವರ ಚಿತ್ತದಲ್ಲಿ ಜ್ಞಾನ ದಾರಢ್ಯ ಕೊಟ್ಟು, ವಾಯುದೇವರು ಸರ್ವರಲ್ಲಿ ವಿಜ್ಞಾನಾಭಿಮಾನಿಗಳೆಂದು ಕರೆಸಿಕೊಳಥಾರೆ. ಇದು ವಾಯುದೇವರಹೊರತು ದಾರಿಗೆಸಾಧ್ಯ? ಈತನೇ ಮುಂದಿನ ಕಲ್ಪಕ್ಕೆ ಬ್ರಹ್ಮದೇವರು.

## ಸರಸ್ವತೀ ದೇವೇರ ಪ್ರಕರ್ಣ

ಸರಸ್ವತೀ ದೇವೇರು ಸತ್ವ ರಜಗುಣದಿಂದ ವಿಕಾರವುಳ್ಳ ಮಹ ತತ್ವವೇ ಶರೀರವಾಗಿ ಉಳ್ಳಂಥಾಕಿ ಈಕಿ ಬ್ರಹ್ಮದೇವರ ಪತ್ನಿ ಬ್ರಹ್ಮ ದೇವರಕಿಂತಲೂ ನೂರು ಗುಣಕ್ಕೆ ನ್ಯೂನಳು. ಒಂದೇ ತತ್ವದಲ್ಲಿ ಅಭಿಮಾನಿಯಾಗಿರಲಿಕ್ಕೆ ಪತಿಗಿಂದ ಏನು ಕಾರಣ ನ್ಯೂನ್ಯತಿ ಹೇಳಬೇಕಂದರೆ ಅದು ಲೋಕದಲ್ಲಿ ಸತಿ ಪುರುಷರಲ್ಲಿ ಕಂಡಪೆ. ಒಂದೇ ಮನಿಗೆ ಸತಿ-ಪುರುಷರು ಸ್ವಾಮಿಯಾಗಿದ್ದರೂ ಪುರುಷನಾಧೀನಳು ಸತಿ. ಪತಿ ಸ್ತ್ರೀ ಅಧೀನನಲ್ಲಾ. ಹೀಗೆ ಪತಿಹೊರ್ತು ಮಿಕ್ಕವರಲ್ಲಿ ಪತಿ ದಯದಿಂದ ಪತಿ ಮನಿಯಲ್ಲಿ ಹ್ಯಾಗೆ ಅನ್ಯರಿಗೆ ಸ್ವಾಮಿತ್ವವೋ ಹಾಗೆ ಸರಸ್ವತೀ ದೇವೇರಿಗೆ. ಈ ಸರಸ್ವತೀ ದೇವಿ ವೇದಾಭಿಮಾನಿಎಂದು ಕರಸುಥಾಳೆ ಪತ್ಯುಪದೇಶದಿಂದ ಪರಮಾತ್ಮನ ಆರಾಧಿಸಿ ಪರಮಾತ್ಮನ ಪ್ರಸಾದದಿಂದ

ಸ್ವಯೋಗ್ಯ ಅನಂತ ವೇದಗಳು. ತದನುಸಾರ ಪರಮಾತ್ಮನ ಗುಣಗಳನ್ನು ಕಂಡು ಪರಮಾತ್ಮನ ದರ್ಶನ ಮಾಡುತ್ತಿದ್ದ ಕಾರಣ ಮೊದಲಿಗೆ ವೇದಗಳನ್ನು ಅಪರೋಕ್ಷ ಕರಿಸಿ, ವೇದೋಕ್ತ ಗುಣಗಳನ್ನು ಪರಮಾತ್ಮನಲ್ಲಿ ಉಪಸಂಹಾರ ಮಾಡಿ, ಪರಮಾತ್ಮನ ದರ್ಶನ ಮಾಡಿದ ಪ್ರಯುಕ್ತ ವೇದಾಭಿಮಾನಿಗಳೆಂದು ಸರಸ್ವತೀ ದೇವೇರು ಕರಸುತಾರೆ. ಇವರಿಗೆ ಸಕಲ ಜಗತ್ತಿನಲ್ಲಿ ಸರ್ವ ಚಿತ್ತಾಭಿಮಾನಿತ್ವ ಎಂಥಾದು ಎಂದರೆ ವೇದ ಶಾಸ್ತ್ರೋಕ್ತ ಗುಣಗಳ ಸ್ವಯೋಗ್ಯತಾನುಸಾರ ವೇದ ಶಾಸ್ತ್ರದ್ವಾರ ಪರಮಾತ್ಮನಲ್ಲಿ ಉಪಸಂಹಾರ ಮಾಡೋ ಚಿತ್ತ ದಾವುದೋ ಆ ಚಿತ್ತಾಭಿಮಾನಿ ಸರಸ್ವತೀ ದೇವೇರು ಸರ್ವರ ಬುದ್ಧಿಗೆ ಅಭಿಮಾನಿಯಾಗಿದ್ದಾರೆ ಈ ಸಾಮ್ರಾಜ್ಯ ಸುಲಭವಲ್ಲ. ಇವರು ೧೯೯ ಕಲ್ಪ ಸಾಧನದಿಂದ ಐದಿದ್ದು ಇವರಕಿಂತಾ ನ್ಯೂನರಿಗೆ ಸರ್ವಥಾ ಬಾರದು. ಇವರು ೩೨ ಲಕ್ಷಣದಿಂದ ಪೂರ್ಣರು.

**ಭಾರತೀ ದೇವೇರ ಶರೀರ** ಸತ್ವ ರಜೋಗುಣ ವಿಕಾರವಾದ ಮಹತತ್ವ ಶರೀರ ವುಳ್ಳವರು. ಇವರು ಸ್ವಪತಿಯು ಉಪದೇಶದಿಂದ ಪರಮಾತ್ಮನನ್ನು ಅತಿಶಯ ಭಕ್ತಿಯಿಂದ ಆರಾಧಿಸಿ "ಪುತ್ರಮಿತ್ರ ಸರ್ವಸ್ವಾತ್ತು" ಎಂಬ ಪ್ರಕಾರದಿಂದ ಆರಾಧಿಸಿ ಪರಮಾತ್ಮನ ಪ್ರೀತಿಬಡಿಸಿ ಪರಮಾತ್ಮನ ಪ್ರಸಾದದಿಂದ ಉತ್ಪನ್ನ ಸಮಸ್ತ ವೇದಗಳನ್ನು ಅಪರೋಕ್ಷ ಕರಿಸಿಕೊಂಡು ಪರಮಾತ್ಮನಲ್ಲಿ ಸಮಗ್ರ ವೇದೋಕ್ತ ಗುಣಗಳಿಂದ ಉಪದೇಶಾನುಸಾರ ಉಪಸಂಹಾರಮಾಡಿ ದಿವಸ ದಿವಸಕ್ಕ ಪರಮಾತ್ಮನ ಅಧಿಕ ಅಧಿಕ ಅಪರೋಕ್ಷ ಕರಸಥಾಳೆ. ಭಕ್ತಿ ಅತಿಶಯಮಾಡಿದ ಪ್ರಯುಕ್ತ ಭಾರತಿ ದೇವೇರೆ ಭಕ್ತಿಗೆ ಅಭಿಮಾನಿ. ಹಾಗಾದರೆ ಸರಸ್ವತಿ ದೇವೇರು ಭಕ್ತಿಗೆ ನ್ಯೂನಳೊ ಹ್ಯಾಗಂದರೆ ಅತಿ ತೀವರ ಮನಸ್ಸಿನಲ್ಲಿದ್ದ ಕಾಲಕ್ಕೂ ಪರಮಾತ್ಮ ಮೊದಲೇ ಭಕ್ತಿಪ್ರದರ್ಶನ ಮಾಡಿದ. ದಯಮಾಡಿ ತೋರಿಸಿದ ಕಾರಣ ವೇದಾಭಿಮಾನಿಗಳು ಇವರಿಗೆ (ಭಾರತೀ ದೇವೇರಿಗೆ) ಸ್ವಲ್ಪ ಪರಮಾತ್ಮ ತಡಮಾಡಿ ಭಕ್ತಿ ತೋರಿಸಿದ ಕಾರಣ ಭಕ್ತಿಗೆ ಅಭಿಮಾನಿಗಳು ಈ ನಾಲ್ವರು ಪರಶುಕ್ಲರು ಆದ ಪ್ರಯುಕ್ತ ಇವರಿಗೆ ಕಲಿ ಅವೇಶ ಇಲ್ಲ. ಏನು ಏನು ಅನುಪತ್ಯವಾದರೂ ಪರಮಾತ್ಮನಲ್ಲಿ ಬುದ್ಧಿ

ವಿರೋಧ ತಟ್ಟಲಿಕ್ಕಿಲ್ಲ. ತತ್ಕಾರಣ ದೇವರು ಇವರನ್ನು ಜಗದ್ಗುರುಗಳ ಮಾಡಿದ್ದಾನೆ.

ಇನ್ನು ಬ್ರಹ್ಮ ಕೇವಲ ಸಂಪೂರ್ಣ ಜ್ಞಾನಿ ಘಾಬರಿಯೋಪಾದೆಯಲ್ಲಿ ತೋರಿ ತಪ ತಪ ಶಬ್ದ ಕೇಳಿ ಸಮಾಧಿಗೆ ಕುಳಿತು ಪರಮಾತ್ಮನ ಯಥಾ ನಾಕಲ್ಲ್ಯ ಅಪರೋಕ್ಷ ಕಂಡು ಸೃಷ್ಟಿ ಮಾಡಲಿಕ್ಕ ಕಾರಣನಾದ. ಈತ ಜಗತ್ತಿಗೆ ಅತಿ ಮಹತ್ಮನು. ಈತನಸರಿ ದಾರೂ ಇಲ್ಲದಕಾರಣ ಪ್ರಥಮೋತ್ಪತ್ತಿ ಬ್ರಹ್ಮಗೆ. ವಾಯುದೇವರು ಮಹಾ ವಿಜ್ಞಾನದಿಂದ ಪೂರ್ಣರಾಗಿ ಪರಮಾತ್ಮಗೆ ಕೇವಲ ಪ್ರೀತ್ಯಾಸ್ಪದರು ಕಾರಣವೇ ವಿರಾಟರೂಪಕ್ಕೆ ಕೇವಲ ಆಧಾರವಾಗಿ, ಸಕಲ ಜಗತ್ತಿಗೆ ಕೇವಲ ಶ್ವಾಸ ರೂಪ ದಿಂದ ಜೀವನಕ್ಕ ಆಧಾರರಾಗಿದ್ದಾರೆ. ವಿಜ್ಞಾನಿಗಳಾದ ಕಾರಣವೇ ಮಹಾ ಕಲಿಯುಗದಲ್ಲಿ ಅವತಾರಮಾಡಿ, ಅನ್ಯ ಮತಗಳ ತುಚ್ಛೀಕರಿಸಿ ಸಚ್ಛಾಸ್ತ್ರ ನಿರ್ಮಾಣಮಾಡಿ, ಯೋಗ್ಯರ ಜ್ಞಾನಕ್ಕ ಸಾಧಕವಾದ ಭಾಷ್ಯಾದಿಗ್ರಂಥ ಸಾಧಕರಾಗಿದ್ದಾರೆ. ಸರಸ್ವತೀದೇವಿ ವಾಯುದೇವರ ಪ್ರಸಾದದಿಂದ ಪರಮಾತ್ಮನ ಅತಿ ತೀವ್ರದಲ್ಲಿ ವೊಲಿಸಿಕೊಂಡು ತದುಕ್ತ ಗುಣಗಳಿಂದ ತಮ್ಮ ಯೋಗ್ಯತೆಯಂತೆ ಪೂರ್ಣವಾಗಿ ಉಪಾಸನೆ ಮಾಡಿದಕಾರಣವೇ ಸರಸ್ವತೀವಾಕು ಎಂದು ಕರಸುಥಾಳೆ. ಈಗ ಲೋಕದಲ್ಲಿ ವಿದ್ಯಾಭ್ಯಾಸ ಮಾಳ್ಪ ಜನರೆಲ್ಲ ಸರಸ್ವತೀ ಪ್ರಾರ್ಥನ ಮಾಡಬೇಕು. ಮಹಾ ಭಕ್ತಿಯಿಂದ ಪರಮಾತ್ಮನ ವೊಲಿಸಿದ ಸ್ವಭಾವಾವಕಾರಣ ಎಲ್ಲಿಂದರೆ ದ್ರೌಪದಿ ದುರ್ಯೋಧನನ ಸಭೆಯಲ್ಲಿ ಅತ್ಯಂತ ವಿಪತ್ತು ಬಂದೋಪಾದೆಯಲ್ಲಿ ಕಂಡಕಾಲಕ್ಕೆ ಸರಿಯೇವೆ ? ನಮೊಚಿನ ಮಾತನಾಡುವವರನ್ನು ಒಬ್ಬರನ ಕಾಣದಿದ್ದರೂ ಸರಿಯೇವೆ ? ರುದ್ರಾದಿ ದೇವತಾ ಸಮೂಹವೆಲ್ಲಾ ದುಷ್ಟರ ಪಕ್ಷವಾತ ಮಾಡಿದರೂ ಸರಿಯೇವೆ ? ತಾವು ಪರಮಾತ್ಮನ ವೊಲಿಸಲಿಕ್ಕ ಅರಘಳಿಗೆ ಅವಕಾಶವಿಲ್ಲದಿದ್ದರೂ ಸರಿಯೇವೆ ? ತಾವು ಪರಮಾತ್ಮನ್ನ ವೊಲಿಸಲಿಕ್ಕ ತಾವು ಪೂರ್ವದಲ್ಲಿ ಭಕ್ತಿ ಮಾಡಿ, ಸಮಗ್ರ ವೇದಗಳನ್ನ ಅಪರೋಕ್ಷ ಕರಿಸಿದ್ದರೋ ಅದೇ ಭಕ್ತಿ. ಆ ವ್ಯಾಳ್ಯದಲ್ಲಿ ಪರಮಾತ್ಮಗೆ ತೋರಿ ಲವಕಾಲದಲ್ಲೇವೇ ಸಮಗ್ರ ದೇವತಾ ಸಭೆ, ದುಷ್ಟರ ಸಭೆಯಲ್ಲಾ ಅತಿ ತುಚ್ಛಿಕರಿಸಿ, ನಿಜ ಪತಿ ಪ್ರಸಾದದಿಂದಲ್ಲ್ಯೂ ತಮಗೆ ಸರಿ ಜಗತ್ತಿನಲ್ಲಿ

ದಾರು ಇಲ್ಲವೆಂದು ತಿಳಸಬೇಕಾದ ಕಾರಣ ತಾವು ಅತಿ ಪ್ರಯಾಸ ಬಡದ ಲೇವೆ ದಾರು ಎಷ್ಟು ಪ್ರಯಾಸದಿಂದ ತಮ್ಮನ್ನಶ್ರಮಬಡಿಸಬೇಕೆಂದು ಆಲೋಚಿಸಿದ್ದರೋ ಆ ಮಂದಮತಿಗಳಿಗೆ ಪರಮಾತ್ಮನ ಸ್ತುತಿ ಮಾತ್ರ ದಿಂದ ಮೆಚ್ಚಿ ಅವರ ಪ್ರಯತ್ನವೇ ಅವರಿಗೆ ಮಹಾ ಮೃತ್ಯುಮಾಡಿ ತೋರಿಸಿದ್ದು ಜಗತ್ಯಲ್ಲಾ ಬಲ್ಲದ್ದು. ಇಲ್ಲಿ ಹ್ಯಾಂಗ ವಸ್ತ್ರ ಅನಂತ ಅಪರಿ ಮಿತ ದರ್ಶನ ಲೋಕರಿಗೆ ಮಾಡಿ ತೋರಿಸಿದರೋ ಪೂರ್ವದಲ್ಲಿ ತಾವು ಭಕ್ತಿಮಾತ್ರದಿಂದ ವೇದಗಳನ್ನು ವೇದೋಕ್ತ ಸಮಗ್ರ ಪರಮಾತ್ಮನ ಗುಣ ಗಳನ್ನು ಅಪರೋಕ್ಷೀ ಕರಿಸಿದ ಕಾರಣ ಭಾರತೀ ದೇವಿ ಮುಖ್ಯ ಭಕ್ತಿಗೆ ಅಭಿಮಾನಿಗಳು. ಪರಮಾತ್ಮನಲ್ಲಿ ಅತಿ ಪ್ರಕಾಶವಾದ ಸ್ನೇಹಉಳ್ಳಾಕಿ ಯಾದಕಾರಣ ಭಾರತೀ ಎಂಬೋ ಹೆಸರು. ಪರಮಾತ್ಮನಲ್ಲಿ ಅತಿ ಸ್ನೇಹ ವುಳ್ಳಾಕಿ ಆದಕಾರಣವೇ ಶ್ರದ್ಧೆ ಎಂಬೋ ಹೆಸರು. ಇಂಥಾ ಭಕ್ತಿಯನ್ನು ಗರುಡ ಶೇಷಾದಿಗಳು ಸ್ವಪ್ನದಲ್ಲಿ ಕಾಣರು. ಇದು ಮಹತತ್ವವಾಸವಾಗಿ ದ್ದವರ ಶ್ರದ್ಧೆ ಐಶ್ವರ್ಯ ಸತ್ವರಜೋಗುಣ ಪ್ರಯೋಜನ. ಇವರಿಗೆ ನಾಲ್ಕನೇ ಪ್ರಯೋಜನವುಳ್ಳದ್ದು ಇಲ್ಲಾ ಎಂಬೋ ಪ್ರಯೋಜನವಿಲ್ಲ. ಸಮಗ್ರ ಪ್ರಯೋಜನಕ್ಕೆ ಇವರಿಗೆ ಮುಖ್ಯ ಸ್ವಾಮಿತ್ವ ಆದರೂ ಒಬ್ಬೊ ಬ್ಬರಿಗೆ ಒಂದೊಂದು ಪ್ರಯೋಜನದಲ್ಲಿಟ್ಟು ನಡಸುಥಾರೆ. ಈ ಪ್ರಯೋ ಜನಮಾತ್ರ ದಾರಿಗೂ ಕೊಡೊದಿಲ್ಲ. ಇವರನ್ನ ಅಭಿಮಾನಿಗಳೆಂದು ತಿಳಿಯತಕ್ಕದ್ದು. ಇವರು ಪರಮಾತ್ಮನ ಭಕ್ತಿ ಜ್ಞಾನದಿಂದ ಸುಖ ಬಡು ಥಾರೆ. ಇದರಹೊರ್ತು ಇವರಿಗೆ ಸತ್ಯಲೋಕಾದಿ ಚತುರ್ದಶ ಲೋಕಾಧಿ ಪತ್ಯದಲ್ಲಿ ಅಥವಾ ವೈಕುಂಠದಲ್ಲಿದ್ದಗಣಿತ ಸುಖದಲ್ಲಾದರೂ ಲೇಶ ಮೋಹವಿಲ್ಲ. ಸೃಷ್ಟ್ಯಾದಿ ವ್ಯಾಪಾರದಲ್ಲಿದ್ದ ಕಾಲಕ್ಕೂ ಸಮಾಧಿಯಲ್ಲಿ ದ್ದವರನ ಸೋಲಿಸಥಾರೆ. ಇವರು ಪರಮಾತ್ಮನ ಆಶ್ಚರ್ಯಗಳಲ್ಲಿ ಮುಳುಗಿರಥಾರೆ. ರುದ್ರದೇವರು ಮೊದಲಾಗಿ ಸಮಸ್ತರೂ ಇವರ ಅನು ಗ್ರಹದಿಂದ ಭಕ್ತಿ ಜ್ಞಾನ ಸಮಾಧಿ ಸಂಪಾದಿಸತಕ್ಕದ್ದು. ಇವರು ಭಕ್ತ್ಯಾದಿಗಳಿಂದ ಪರಮಾತ್ಮನ ವೊಲಿಸೋದು ದಾರಿಗೆ ತಿಳಿಯದಕಾರಣ ಅವ್ಯಕ್ತ ತತ್ವಾಭಿಮಾನಿಗಳೆಂದು ಕರಸುಥಾರೆ. ಇವರು ಸಕಲ ಸಜ್ಜನರಲ್ಲಿ ಬಲಭಾಗದಲ್ಲಿ ಮಹತತ್ವಾತ್ಮಕ ೩೬೦೦೦ ಸಹಶ್ರ ನಾಡಿಗಳಲ್ಲಿ ವಾಸವಾಗಿ

ಪರಮಾತ್ಮನ ಅರ್ಚನೆ ಮಾಡಥಾರೆ. ಇನ್ನು ಅವರ ಮಹತ್ಮೆ ಹೇಳಲಿಕ್ಕ ಶೇಷದೇವರಿಗೆ ಶಕ್ಯವಿಲ್ಲ. ನಮ್ಮಂಥ ಪಾಮರರಿಂದ ಥರವೆ ? ಇಷ್ಟು ಹರಿ ಗುರುಗಳು ಬರೆಸಿದಷ್ಟು ಬರೆಯಲ್ಪಟ್ಟಿತು. ಇನ್ನು ಸೋತ್ತಮರಲ್ಲಿ ನಿಂತು ಅಗಾಧಮತಿಯಿಂದ ಸಿಕ್ಷಿಸಿದರೆ ಅವರಿಗೆ ನಾನು ದಾಸಾನುದಾಸ. ಇಷ್ಟು ಖುಜುಗಣದವರ ಸಾಧನ.

## ಅಹಂಕಾರತತ್ವ

ಇನ್ನು ಅಹಂಕಾರ ತತ್ವದಲ್ಲಿ ವಾಸವಾಗಿದ್ದವರು ಸತ್ವ ತಮೋಗುಣ ದಿಂದ ವಿಕಾರವಾದ ಅಹಂಕಾರ ತತ್ವವೇ ಶರೀರವಾಗಿ ಉಳ್ಳವರು. ಈ ತತ್ವ ಮಹತತ್ವ ನೋಡಲಿಕ್ಕೆ ತಮೋಗುಣವೆಂದು ಶಾಸ್ತ್ರಸಿದ್ಧ. ಸತ್ವ ತಮೋಗುಣದ ವಿಕಾರವಾದ ಅಹಂಕಾರ ತತ್ವಾಭಿಮಾನಿಗಳು ಗರುಡ ಶೇಷ, ರುದ್ರದೇವರು, ತದ್ಭಾರ್ಯರು ದೇವರ ಆರುಮಂದಿ ಹೆಂಡರು. ಇವರು ಅಹಂಕಾರ ತತ್ವದಲ್ಲಿ ವಾಸವುಳ್ಳವರಾಗಿ ಉತ್ಪನ್ನರಾಗಿದ್ಧಾರೆ. ಇನ್ನು ಈ ಅಹಂಕಾರ ತತ್ವದಲ್ಲಿ ವಾಸವಾಗಿದ್ದವರು ಸತ್ವ ತಮೋಗುಣ ದಿಂದ ವಿಕಾರವಾದ ಅಹಂಕಾರ ತತ್ವವೇ ಶರೀರವಾಗಿ ಉಳ್ಳವರು. ಈ ತತ್ವ ಮಹತತ್ವ ನೋಡಲಿಕ್ಕೆ ತಮೋಗುಣವೆಂದು ಶಾಸ್ತ್ರಸಿದ್ಧ. ಇನ್ನು ಮುಂದೆ ಆಪ್ತವಾದಂಥಾ ರಜಸತ್ವ ನೋಡಲಿಕ್ಕೆ ಅತಿ ಸತ್ವಗುಣದೋಪಾ ದಿಯಲ್ಲಿ ಅದೆ. ಮಹತತ್ವದ ಹತ್ತರಲ್ಲಿ ಒಂದನೇ ಭಾಗವೆಂದು ಹೇಳಥಾರೆ ಈ ಅಹಂಕಾರತತ್ವ ಉತ್ಪತ್ತಿಗೆ ಮಹತತ್ವವೇ ಕಾರಣ. ಇಲ್ಲಿ ವಾಸವಾ ಗಿದ್ದವರಿಗೆ ಬ್ರಹ್ಮ ವಾಯು ಸರಸ್ವತಿ ಭಾರತೀ ದೇವೇರದ್ವಾರ ಪರಮಾತ್ಮ ಹುಟ್ಟಸಥಾನೆ. ತತ್ಕಾರಣ ಬ್ರಹ್ಮ ವಾಯುದೇವಗೆ, ಗರುಡ ಶೇಷರು, ಪ್ರತಿಬಿಂಬರು. ಇವರಿಗೆ ಗುರುಗಳು ಬ್ರಹ್ಮ ವಾಯುದೇವರು. ಹಾಗು ಸರಸ್ವತಿ ಭಾರತೀ ನಾಲ್ವರೂಸರಿ. ಗರುಡಾದಿ ಮೂರುಮಂದಿ ಅಹಂಕಾರ ತತ್ವಾಭಿಮಾನಿಗಳು. ಇದರೊಳಗೆ ಒಬ್ಬೊಬ್ಬರು ಒಂದೊಂದಕ್ಕೆ ಅಭಿ ಮಾನಿಗಳೆಂದು ಕರಸಥಾರೆ. ಜೀವಾಭಿಮಾನಿ ಶೇಷದೇವರು ಕಾಲಾಭಿ ಮಾನಿ ಗರುಡ ದೇವರು ಮನೋಭಿಮಾನಿ ರುದ್ರದೇವರು ಇವರು ತೃತೀಯ ಈಶ್ವರರು. ಇವರಿಗೆ ಇಂಥ ಅಭಿಮಾನತ್ವ ಏನುಕಾರಣ ಬಂತು ಎಂದರೆ ಇವರು ಹುಟ್ಟಿ ಪರಮಾತ್ಮನ ಉಪಾಸನಾ ಮಾಡಬೇಕಾದರೆ ತಮ್ಮ

ಗುರುಗಳಕಿಂತಲ್ಲ್ಯೂ ಸ್ಯೂನರಾದಕಾರಣ ಸತ್ವ ತಮೋಗುಣ ವಿಕಾರ ಉಳ್ಳವರಾದಕಾರಣ ಮನಸ್ಸು ಅನ್ಯತ್ರ ಹೋದರೆ ಗುರುಪದೇಶಾನಂತರ ಯುಕ್ತಿಯಿಂದ ಪರಮಾತ್ಮನ ಆರಾಧನಾ ಮಾಡಲಿಕ್ಕೆ ಕಲಿತರಾದಕಾರಣ ಯಾವ ಯುಕ್ತಿಯಿಂದ ಕಲಿತರೆ ಆ ಅಭಿಮಾನಿತ್ವ ಇವರಿಗೆ. ಅದು ಯಾವುದು ಎಂದರೆ

## ಶೇಷದೇವರ ಪ್ರಕರಣ

ನಾನು ಜೀವನನೇ ಸರಿ. ಸರ್ವಥಾ ಶರೀರಸಲ್ಲ ಎಂಬೋ ಭೇದ ಸಂಪಾದಿಸಿ ಜೀವಾ ಎಂದರೆ ಕೇವಲ ನಿತ್ಯನಾದಂಥವ. ಇಂಥಾ ಜೀವ ನಿಗೆ ಅನಿತ್ಯಸುಖ ಲಾಭವಿಲ್ಲ. ನಿತ್ಯಸುಖ ಸಂಪಾದಿಸಬೇಕಾದರೆ ಪರಮಾ ತ್ಮನೇ ಪರಮಗತಿ. ನಿತ್ಯರಿಗೆ ನಿತ್ಯ ಗುರೂಪದೇಶ ಹೀಗ ಇದ್ದದು ನಿಜ ವೆಂದು ಪರಮಾತ್ಮನಲ್ಲಿ ಮ್ಯಾಲಿನವರು ಪ್ರಸಾದಮಾಡಿದಪ್ರಕಾರ ಭಕ್ತಿ ಯಿಂದ ಪರಮಾತ್ಮನ ಪೊಲಿಸಿ ತಮ್ಮ ತಮ್ಮ ಯೋಗ್ಯತಾನುಸಾರ ಸಮಗ್ರ ವೇದದೃಷ್ಟರಾಗಿ ತದುಕ್ತ ಗುಣಗಳ ಉಪಸಂಹಾರಮಾಡಿ, ಜಗ ತ್ತಿನಲ್ಲಿ ಅನ್ಯ ಸಂಪತ್ತು ಅತಿಶಯ ಹೇಯವೆಂದು ತಿಳಿದು ಪರಮಾತ್ಮನ ಫಲಾಬೇಡಿ ಪರಮಾತ್ಮನೇ ಅತಿ ಸುಖ ಎಂದು ಹಾರೈಸಿ ಸರ್ವದಾ ಪರ ಮಾತ್ಮನ ಸೇವಾರೂಪ ಫಲ ಸಂಪಾದಿಸಿದ್ದು; ಅದು ಯಾವದು ಎಂದರೆ ಪರಮಾತ್ಮಗೆ ಹಾಸಿಕೆಯಾದನು, ಆಸನನಾದ, ಛತ್ರನಾದನು. ಆ ಶೇಷ ದೇವರ ಸುಖ ಯಾರಿಂದ ವರ್ಣಿಸಲಿಕ್ಕಶಕ್ಯ. ಸಾಕ್ಷಾತ್ ಪರಮಾತ್ಮನ್ನ ಧರಿಸಿದ ಕಾರಣ ಈ ಚತುರ್ದಶ ಭುವನಾತ್ಮಕ ಬ್ರಹ್ಮಾಂಡ ಶಿರಸ್ಸಿನಲ್ಲಿ ಸಾಸಿವೆಯೋಪಾದೆಯಲ್ಲಿ ಧರಿಸಿದ್ದಾನೆ. ನಾನು ಜೀವನೆಂದು ತಿಳಿದ ವೈರಾಗ್ಯೋಪೇತವಾದ ಮನಸ್ಸಿಗೆ ಶೇಷದೇವರು ಅಭಿಮಾನಿತ್ವವನ್ನು ಐದಿದ್ದಾನೆ. ಈಗ ಯಾವ ಪ್ರಾಣಿಗಾದರೂ ನಾನು ಜೀವನೆಂತೆಂದು ದೇಹತ್ಯಾಗ ಮಾಡೋಅಂಥ ವೈರಾಗ್ಯೋಪೇತವಾದ ಮನಸ್ಸಿಗೆ ಶೇಷ ದೇವರು ಅಭಿಮಾನಿ. ಅವರು ದಯಮಾಡದೆ ಹೋದರೆ ನಾನು ಜೀವ ನೆಂತೆಂಬೋಜ್ಞಾನ ಯಾವ ಪ್ರಾಣಿಗಾದರೂ ಸರ್ವಥಾ ಹುಟ್ಟದು. ಇಂಥಾ ಸಂಪತ್ತು ಶೇಷದೇವರಿಗೆ ಸುಲಭದಿಂದ ಬಂತು ಹ್ಯಾಗಂದರೆ, (ಶೇಷದೇವ ರಿಗೆ ಗರುಡದೇವರಿಗೆ ಒಟ್ಟಿಗೆ ಸಾಧನ ೧೦೦ ಕಲ್ಪವೆಂತ ಅನುವ್ಯಾಖ್ಯಾನಾದಿ

ಗ್ರಂಥಗಳಲ್ಲಿ ಹೇಳಿದೆ. ಅದರಂತೆ ಶ್ರೀ ವಿಜಯದಾಸರು ತಾರತಮ್ಯ ಸುಳಾದಿ (ಸ್ವರಮಣಸ್ವಾತಂತ್ರ) ಎಂಬುದರಲ್ಲಿ ಆದಿತಾಳದಲ್ಲಿ ಗರುಡಾದಿಗಳಿಗೆ ೫೦ ಕಲ್ಪ ಸಾಧನ ೫೦ ಕಲ್ಪ ಅಪರೋಕ್ಷನಂತರ ಪ್ರಾರಬ್ಧ ಭೋಗ (ಐದಲಿಗೆ ಐವತ್ತು ಎಂದು ಜಗನ್ನಾಥದಾಸರು) ೮೦ ಕಲ್ಪದೊಳಗೆ ನಾಲ್ವತ್ತು ಕಲ್ಪ ಅಪರೋಕ್ಷ ಸಾಧನಮಾಡಿ ೪೦ ಕಲ್ಪ ಅಪರೋಕ್ಷನಂತರ ಪರಮಾತ್ಮನ ಪ್ರೀತಿ ಬಡಿಸಿದ ಕಾರಣ ಶೇಷಪದಪ್ರಾಪ್ತಿ ಇಂದ್ರಾದಿಗಳಿಗೆ ಮೋಕ್ಷನಂತರವೂ ಈ ಸಾಮ್ರಾಜ್ಯ ಬಾರದು. ನಾನು ಜೀವನೆಂದು ತಿಳಿಯೋ ಜ್ಞಾನಕ್ಕೆ ಬೇಕಾಗಿದ್ದರೆ ಶೇಷದೇವರ ದಯ ಸಂಪಾದಿಸಬೇಕು. ಇವರಿಗೆ ಸತ್ವತಮೋಗುಣ ಪ್ರಯೋಜನವೇನು ಎಂದರೆ ಮಹತ್ಮೆ ಹೇಳಲ್ಪಟ್ಟಿತು. ಪರಮಾತ್ಮನ ಪ್ರೀತಿಗೋಸ್ಕರ ಜಗತ್ತು ಸಂಹಾರಮಾಡೋಣವೇ ತಮೋಗುಣದ ಪ್ರಯೋಜನ. ಆದರೂ ಅವರಿಗೆ ಲೇಶವೇ ಆಯಿತು. ಎತ್ಕಿಂಚಿತ್ ಪರಮಾತ್ಮನ ಸೇವೆಯಿಂದ ಪ್ರತಿಕೂಲತೆ ಇಲ್ಲ. ತಮೋಗುಣದ ಪ್ರಯೋಜನ ಹ್ಯಾಗಂದರೆ,– "ಅಹಿಂಸಾ ಪರಮೋಧರ್ಮಃ" ಎಂಬೋ ನ್ಯಾಯದಿಂದ ಅಜ್ಞಾನಿಗಳಿಗೆ ಹೇಳಬಹುದು. ಪರಮಾತ್ಮನ ಭಕ್ತಿಯೇ ಮುಖ್ಯ ಪ್ರಯೋಜನವಿದ್ದಲ್ಲಿ ಇದು ಪಾಪವಲ್ಲ. ಪರಮಾತ್ಮನಲ್ಲಿ ಯತ್ಕಿಂಚಿತ್ ವಿಮುಖನಾದದ್ದು ಕಂಡರೆ ತಮೋಗುಣದ ಪ್ರಯೋಜನವೆಂದರೆ ಇದು ಮೂಲರೂಪದಲ್ಲಿ ಸರ್ವಥಾ ಬಾರದು. ಅವತಾರದಲ್ಲಿ ಬಾಹೋದು ಸತ್ರಾಜಿತರಾಯನ ಮಣಿಗೋಸ್ಕರ ಐದುವರ್ಷ ಪರಮಾತ್ಮನಲ್ಲೇ ವಂಚನಾ ತಿಳಿದುಬಿಟ್ಟು ಹೋದದ್ದು. ದುರ್ಯೋಧನಾದಿಗಳಿಗೆ ವಿದ್ಯಾಹೇಳಿ ಅವನ ಪಕ್ಷಪಾತ ಮಾಡಿದ್ದೇ ಮುಖ್ಯವಾಗಿ ತಮೋಗುಣದ ಪ್ರಯೋಜನ. ಇದೇ ಪರಮಾತ್ಮಗೆ ಮಹಾ ಅಪ್ರೀತಿ. ಇದೇ ಗುಣದಿಂದಲೇ ಭಾರತೀದೇವೇರಿಗೆ ಶೇಷದೇವರಿಗೆ ಶತಗುಣ ನ್ಯೂನಾಧಿಕ ತಿಳಿಯತಕ್ಕದ್ದು. ಇನ್ನು ಭಾರತ್ಯಾದಿಗಳ ಜ್ಞಾನಾನಂದಾದಿ ಮಹತ್ಮೆ ಶೇಷದೇವರಿಗೆ ಆದ್ಯಂತ ತೋರದು ಎಂದು ಅನಂತಗುಣನ್ಯೂನಾಧಿಕವು ಶೇಷದೇವರ ಪ್ರಕರಣ ಸಮಾಪ್ತಿ.

# ಗರುಡದೇವರ ಸಾಧನ ಪ್ರಕರಣ

ನಾವು ದಾರಿಂದ ಉತ್ಪನ್ನರಾಗಿದ್ದೇವೆ ಆ ಭಾರತೀ ವಾಯುದೇವರನ್ನ ಗುರುಗಳನ್ನು ಮಾಡಿಕೊಂಡು ಉಪದಿಷ್ಟರಾಗಿ ಪರಮಾತ್ಮನ ಆರಾಧಿಸ ಬೇಕಾದರೆ ಮನಸ್ಸು ಕೇವಲ ಸ್ವಾಧೀನಕ್ಕ ಬಾರದೇ ಹೋದರೆ ಯುಕ್ತಿಯಿಂದ ಮನಸ್ಸನ್ನು ಸಮಾಧಾನಮಾಡಿ ಉಪದಿಷ್ಟಾನುಸಾರ ಪರಮಾತ್ಮನ ವೊಲಿಸಿ ಪರಮಾತ್ಮನ ಪ್ರಸಾದ ಸಂಪಾದಿಸಿದ ಯುಕ್ತಿ ದಾವುದೋ ಆ ಅಭಿಮಾನಿತ್ವ ಗರುಡದೇವರಿಗೆ. ಗರುಡದೇವರು ಮನಸ್ಸಿನಕೂಡ ಮಾತನಾಡೋಪ್ರಕಾರ, ಮನಃ ಹಿಂದೆ ೭೯ ಕಲ್ಪದಲ್ಲಿ ಬಗೆಬಗೆಯಾಗಿ ವಿಷಯ ಗಳು ಅನುಭೋಗಿಸಿದ್ದೆಯಲ್ಲಾ ? ದಾವ ವಿಷಯ ನಿನ್ನಸಂಗಡ ಬಂತು ? ವಿಷಯಸ್ವಭಾವ ಎಂಥಾದು ಎಂದರೆ ಪರಮಾತ್ಮ ಕಾಲಾನುಸಾರವಾಗಿ ಲಾಭಮಾಡಿ ಕೊಡಥಾನೆ. ಕಾಲಾನುಸಾರ ಕೆಡಿಸುಥಾನೆ. ನಿನಗೆ ಪರಮಾತ್ಮ ಕಾಲದಿಂದ ಈಗ ಹುಟ್ಟಿಸಿದ್ಧಾನೆ. ಮುಂದೆ ಶರೀರದಿಂದಲ್ಲಿ ಏನು ಅನುಭವ ಜೀವಗೆ ಆಗತಕ್ಕದ್ದು. ಅದು ಎಲ್ಲಿ ಹೊಕ್ಕರೂ ಬಿಡದೇ ಪರಮಾತ್ಮ ಮಾಡಿಸುಥಾನೆ. ಈಗ ನಮಗ ಜನುಮಬಂದದಕ್ಕ ಬ್ರಹ್ಮ ದೇವರ ೧೦೦ವರ್ಷವರೆಗೆ ತನ್ನುದರದಲ್ಲಿಟ್ಟುಕೊಂಡು ಈಗ ತನ್ನಿಂದ ತಾನೆ ಹುಟ್ಟಿಸಿದ್ಧಾನೆ. ಸಕಲ ಭೋಗಗಳು ಅನಿತ್ಯವಾದಂಥಾದ್ದು. ಕಾಲಾನುಸಾರ ಪರಮಾತ್ಮನಿಂದ ಪ್ರಾಪ್ತವಾಗಿ ಕೂಡುವಂಥಾದ್ದು. ನಿನಗೆ ಹಿಂದಿನ ಜನುಮದ ಅನುಭವವೇ ಸಾಕ್ಷಿ. ಮುಂದೆ ಬಂದ ಉಪಾಯ ಕಾಲಕಾಲಕ್ಕ ಬಾಧೆ ದಾವ ವಿಷಯಕ್ಕ ಇಲ್ಲವೋ ಅದನ್ನು ಸಂಪಾದಿಸುವದರಿಂದ ಸುಖ ವುಂಟು ಎಂದು ಹೇಳಿದಪ್ರಕಾರ ಪರಮಾತ್ಮ ಪರಮನಿತ್ಯ. ಆತಗೆ ಕಾಲ ಬಾಧೆ ಇಲ್ಲ. ಆತನ ಸೇವೆಯೇ ಮೋಕ್ಷಾನಂದದಕಿಂತಲ್ಲ್ಯೂ ಅತಿಶಯ ಸುಖವೆಂದು ಶಾಸ್ತ್ರಸಿದ್ಧ. "ಯಾವತ್ ಸೇವಾಪರೇ ತತ್ವೇ ತಾವತ್ ಸುಖವಿಶೇಷತಃ" ಎಂಬ ಪ್ರಮಾಣಾನುಸಾರ ಗುರುಗಳು ಉಪದೇಶ ಮಾಡಿದ ಮಂತ್ರದಿಂದ ಪರಮಾತ್ಮನ ವೊಲಿಸ್ಸಿ, ನಿತ್ಯವಾದ ಪರಮಾತ್ಮನ ಸೇವೆ ಅವಿಚ್ಛಿನ್ನವಾಗಿ ಹ್ಯಾಂಗದೋ ಹಾಗೆ ಮಾಡು ಎಂದು ವೊಡಂಬಡಿಸಿ ನಿನ್ನ ಸೇವೆ ಪರಮ ಪುರುಷಾರ್ಥವದೆ ವರಾಕೊಡು ಎಂದು ಕೇಳಿಕೊಂಡನು ವಾಹನನಾಗಿ ಇಹೋ ಪದವಿ ಪರಮಾತ್ಮ ಕೊಟ್ಟ. ಗರುಡ ದೇವರಿಗೆ

ಕಾಲಾಭಿಮಾನಿತ್ವ ಚಿತ್ತಾಭಿಮಾನಿತ್ವ ಸರ್ವರಲ್ಲಿ ಇರೋಹಾಂಗ ಸಾ-
ಮ್ರಾಜ್ಯ ಕೊಟ್ಟನು. ಕಾಲಾನುಸಾರದಂತೆ ಪ್ರವೃತ್ತಿ ದೇವರಿಂದ ಸರ್ವದಾ
ಆಗುತ್ತದೆಂಬೋ ಧೈರ್ಯದಿಂದ ದೇವರ ಪಾದದಲ್ಲಿ ಯರಗೋ ಮನಸಸ್ಸು
ದಾವದೋ ಆ ಮನಸ್ಸಿಗೆ ಗರುಡದೇವರು ಅಭಿಮಾನಿ. ಗರುಡದೇವರ
ಪ್ರಸಾದ ಸಂಪಾದಿಸದೇ ಹೋದರೆ ಇಂಥಾ ಧೈರ್ಯ ಬಾರದು.

ಸತ್ವ ತಮೋಗುಣದ ಕಾರ್ಯ ಇವರಿಗೆ ದಾವದು ಎಂದರೆ ಕಾಲಾಭಿ
ಮಾನಿತ್ವ ಇವರಿಗೆ ಇದ್ದಮ್ಯಾಲೆ ಕಾಲಬಂತು ಎಂದರೆ ಸಂಹಾರ ಬಂತು
ಎಂಬುವದು ಪ್ರಸಿದ್ಧವಾಗಿದ್ದ ಪ್ರಯುಕ್ತ ಸತ್ವ ತಮೋಗುಣದ ಕಾರ್ಯ
ಇವರಿಗೆ ಸಿದ್ಧ. ಇವರಿಗೆ ಅವತಾರವಿಲ್ಲದ ಕಾರಣ ಬಲರಾಮದೇವರಹಾಗೆ
ಇವರಿಗಿಲ್ಲ. ಅವತಾರ ಬಂದರೆ ಅದೂ ಬರತಕ್ಕದ್ದು. ಆದರೂ ಅಪ
ರೋಕ್ಷ ಜ್ಞಾನಿಗಳಿಗೆ ಅದು ದೋಷವಲ್ಲ. ಯಾಕಂದರೆ ರಜಸತ್ವಗುಣದ
ಕಿಂತಲ್ಲ್ಯಾ ಸತ್ವ ತಮೋಗುಣ ಅತ್ಯುತ್ತಮ. ಅವರು ದುಷ್ಟರ ಪಕ್ಷಪಾತ
ಮಾಡಿದರೂ ಕೊನಿಗೆ ದೇವರ ಸೇವೆ ಆಗುತದೆ. ಇದರೊಳಗೆ ಒಬ್ಬರಿಗೆ
ಹೇಳಿದರೆ ತತ್ಸಮಾನರಲ್ಲಿ ಏಕಪ್ರಕಾರ ತಿಳಕೊಳ್ಳತಕ್ಕದ್ದು. ಸಮಾನ
ಜ್ಞಾನಾನಂದ ಭಾಗಿಗಳಾದ ಪ್ರಯುಕ್ತ ಹೇಳಿದೆವು.

## ಇನ್ನು ರುದ್ರದೇವರ ಮಹತ್ಮೆ

ಹೇಳುಥೀವಿ ಆತನು ಭಾರತೀ ವಾಯುದೇವರಿಂದ ಉತ್ಪನ್ನನಾಗಿ
ಉಪದಿಷ್ಟನಾಗಿ ಮನಸ್ಸನ್ನು ಪರಮಾತ್ಮನ ಆರಾಧನಿಗೆ ಸಾಧನಕ್ಕ ಬಾರದ
ವ್ಯಾಳ್ಯ ಮನಸ್ಸು ತಿದ್ದಿದ ಪ್ರಕಾರವಾಗಿ ಹೇ ಮನಃ ವಿಷಯಾದಿಗಳ
ಸ್ವರೂಪ ತಿಳಿಯದಲೇ ಅಲ್ಲಿ ಏನುಕಾರಣ ಮೋಸಹೋಗುತಿದ್ದಿ ? ವಿಷಯ
ಗಳ ಸ್ವರೂಪ ಎಂಥಾದ್ದು ? ವಿಷಯಗಳ ಸಂಬಂಧ ಮಾಡಿದರೆ ಏನಾಗು
ತದೆ ಎಂದರೆ ಸರ್ಪದ ಶಿರೋರತ್ನ ಬಯಸಿದಹಾಗೆ, ಅಗ್ನಿ ಕಾಂತಿ ಬಹು
ಛಲೋದು ದಾರಿಗೆ ಕೊಡೆನೆಂದು ಉಡಿಯೊಳಗೆ ಅಗ್ನಿ ಬಚ್ಚಿಟ್ಟುಕೊಂ-
ಢಾಂಗೆ ನಿನ್ನ ಸ್ವರೂಪನಾಶನ ಮಾಡುತದೆ. ತಾನು ಕೆಟ್ಟು ಹೋಗುತ್ತದೆ.
ಇದರ ಸಂಬಂಧದಿಂದ ದ್ವೇಷ ಬೆಳಸುತ್ತದೆ. ಪರಮಾತ್ಮ ವಿಮುಖನಾದರೆ

ಸ್ವತಂತ್ರ ಶಿರೋಮಣಿ ನಾಳೆ ನಿನ್ನ ನರಕಪ್ರವೇಶ ಮಾಡಿಶ್ಯಾನು "ಧ್ಯಾ-ಯತೋ ವಿಷಯಾನ್ಪ್ರೂಂಸಃ" ಎಂಬ ಪ್ರಮಾಣಥೇನಿಸಿಕೋ ವಿಷಯ ದಲ್ಲಾದರೂ ಪರಮಾತ್ಮನೇ ಬಿಂಬನಾಗಿ ಸುಖಬಡಸಬೇಕಲ್ಲ ಆ ವಿಷಯ ದ್ವಾರಾ ಸುಖ ಕೊಡದಲೇ ಹೋದರೆ ನಿನಗೆ ಬಾರದಲ್ಲ. ಇದರಮೇಲೆ ನಿನಗೆ ಸುಖ ಬೇಕಾಗಿದ್ದರೆ ಗುರೂಪದೇಶಪ್ರಕಾರ ಪರಮಾತ್ಮನ ಮೆಚ್ಚಿಸಿ ಸಮಗ್ರ ವೇದಗಳ ಅಪರೋಕ್ಷೀಕರಿಸಿ ವೇದೋಕ್ತಗುಣಗಳಿಂದ ಉಪ ಸಂಹಾರಮಾಡಿ, ಪರಮಾತ್ಮನ ದಯ ಸರ್ವದಾ ಇರೋಹಾಗೆ ಪರಮಾ ತ್ಮನಲ್ಲಿ ಸ್ನೇಹ ಅತಿಶಯ ಮನಸ್ಸಿಗೆ ಬಾಹೋಹಾಗೆ ವರ ಸಂಪಾದಿಸು ಯೆಂದು ಮನಸ್ಸಿಗೆ ಮೋಹ ನಿಗ್ರಹಮಾಡಿ ಪರಮಾತ್ಮನ ಪ್ರೀತಿ ಧ್ಯಾನಾ ನುಷ್ಠಾನದಿಂದ ಪರಮಾತ್ಮನ್ನ ಕಂಡು ಪ್ರತ್ಯಕ್ಷ ಕರಿಸಿದಮ್ಯಾಲೆ ವರ ಕೇಳೆಂದು ಪರಮಾತ್ಮ ನುಡಿದರೆ ನಿನ್ನ ಸ್ನೇಹವೆ ವರಾ ಕೊಡು ಎಂದು ಕೇಳಿಕೊಂಡು ಸ್ನೇಹ ಸಂಪಾದಿಸಿ, ತರುವಾಯದಲ್ಲಿ ವಿಷಯ ಹೇಯ ವೆಂದು ತಿಳಿದು ಮನೋನಿಗ್ರಹ ಮಾಡಲಿಕ್ಕ ಸರ್ವರ ಮನಸ್ಸಿಗೆ ಅಭಿಮಾ ನಿಯಾಗು ಎಂದು ಸರ್ವರ ಮನಸ್ಸಿನಲ್ಲಿ ಆವಾಸಪದ ಸಾಮ್ರಾಜ್ಯಕೊಟ್ಟ. ಈಗ ಲೋಕರು ವಿಷಯ ಹೇಯವೆಂದು ತಿಳಿದು ಮನೋನಿಗ್ರಹಮಾಡಿ ಪರಮಾತ್ಮನಲ್ಲಿ ಇಡಬೇಕಾದರೆ ರುದ್ರದೇವರ ಪ್ರಸಾದ ಸಂಪಾದಿಸದೇ ದಾರಿಗೂ ಸ್ವಾಧೀನಕ್ಕ ಬಾರದು.

ಇನ್ನು ಸತ್ವ ತಮೋಗುಣ ಪ್ರಚುರವೇನಂದರೆ ಈತ ಸಂಹಾರಕ್ಕ ಕರ್ತೃ ಎಂಬೋದು ಸರ್ವರೂ ಬಲ್ಲರು. ಅವತಾರಗಳಲ್ಲಿ ಅಶ್ವತ್ಥಾಮಾ ಚಾರ್ಯರು ಮೊದಲಾದವರು ಸಾಕ್ಷಿ. ವೈರಾಗ್ಯಕ್ಕೆ ಶುಕಾಚಾರ್ಯರುಸಾಕ್ಷಿ ತಾರತಮ್ಯದಲ್ಲಿ ಗರುಡ ಶೇಷ ರುದ್ರರು ಸಮರು. ಭಾರತೀದೇವಿಕಿಂತಲೂ ನೂರು ಗುಣಕ್ಕ ನ್ಯೂನರು. ಸಾಕಲ್ಯ ಅವರ ಜ್ಞಾನಭಕ್ತಿ ಮೊದಲಾದ ಗುಣಗಳು ಅರಿಯರು. ಅನಂತಗುಣ ನ್ಯೂನರು ಎಂದು ಜ್ಞಾನಿಗಳು ಹೇಳುಥಾರೆ. ಇವರ ತರುವಾಯ

## ದೇವರ ಷಣ್ಮಹಿಷಿಯರು

ಅಹಂಕಾರ ತತ್ವದಲ್ಲಿ ವಾಸವಾಗಿದ್ದಂಥವರು ಜಾಂಬವತ್ಯಾದಿ ಆರು ಮಂದಿ ದೇವರ ಹೆಂಡರು. ಸತ್ವ ತಮೋಗುಣದಿಂದಲ್ಲೇ ಶರೀರವುಳ್ಳಂಥ

ವರು. ಸತ್ವ ತಮೋಗುಣದ ಸ್ವಭಾವ ಏನು ಎಂದರೆ, ಪರಮಾತ್ಮನ ಹೊರ್ತು ಸರ್ವಥಾ ಅನ್ಯವಿಷಯ ಧನವೆಂದು ಬಯಸಲಿಕ್ಕಿಲ್ಲ. ತತ್ಕಾರಣ ಇವರು ಪರಮಾತ್ಮನೇ ತಮಗೆ ಪತಿಯಾಗಲೆಂದು ಬಹು ತಪಸ್ಸುಮಾಡಿ ಕೃಷ್ಣಾವತಾರದಲ್ಲಿ ಪರಮಾತ್ಮನ್ನ ಹೊಂದಿದರು. ಇವರು ಸರ್ವರಲ್ಲಿ ವಾಸಮಾಡಿದ್ಧಾರೆ. ನಾಭಿ ಷಟ್ಕಮಲದಲ್ಲಿ ಇವರ ವಾಸ ಹೇಳತದೆ. ಇವರು ರುದ್ರದೇವರಕಿಂತಲ್ಲ್ಯಾ ಐದುಗುಣ ನ್ಯೂನರು.

## ಸೌಪರಣಿ ವಾರುಣೀ ಪಾರ್ವತೀ

ಮೂರುಮಂದಿ ಬುದ್ಧ್ಯಾಭಿಮಾನಿಗಳು ವೇದಾಭಿಮಾನಿಗಳೆಂದು ಕರಸುಥಾರೆ. ಮೂರುಮಂದಿ ಸಮರು ಒಬ್ಬರಿಗೆ ಹೇಳಿದ್ದೆ ಮೂರುಮಂದಿಗೆ ತಿಳಕೋಬೇಕು. ಇವರು ಹುಟ್ಯೋಣ ತಮ್ಮ ಪತಿಗಳಿಂದ ಉಪದಿಷ್ಟರಾಗಿ ಉಪದೇಶಾನುಸಾರ ಚರಿಸೇವು ಎಂದರೆ ಮನಸ್ಸು ತೀವ್ರ ಒಡಂಬಡದೇ ಬಹು ಯುಕ್ತಿಗಳಿಂದ ಬದ್ಧಿ ಸ್ಥಿರಮಾಡಿಕೊಂಡು ಉಪದಿಷ್ಟಾನುಸಾರ ಆಚರಿಸಿ ವೇದದೃಷ್ಟರಾಗಿ ಯಥಾಶಕ್ತಿ ವೇದೋಕ್ತ ಗುಣೋಪಸಂಹಾರ ಪರಮಾತ್ಮನಲ್ಲಿ ಮಾಡೋಣದರಿಂದ ಪರಮಾತ್ಮ ಪ್ರೀತನಾಗಿ ನೀವು ಬಹು ಯುಕ್ತಿಗಳಿಂದ ಬುದ್ಧ್ಯಾ ನನ್ನ ನಿರ್ಧಾರ ಮಾಡಿದಿರೆಂದು ಲೋಕ ದಲ್ಲಿ ಹೀಗ ವಿಚಾರಿಸಿ ನನ್ನ ನಿರ್ಧಾರ ಮಾಳ್ಪರಿಗೆ ನಿಮ್ಮ ಪ್ರಸಾದವಾದರೆ ಸಾಧ್ಯವಾಗಲೆಂದು ವರಾ ಕೊಟ್ಟು, ಇನ್ನು ಸಮಗ್ರ ವೇದದೃಷ್ಟರೂ ನೀವೇಸರಿ. ಕೇವಲ ನನ್ನನ್ನೇ ಬಯಸುವರು ನೀವೇ ಸರಿ. ನಿಮ್ಮಿಂದ ಉತ್ಪನ್ನರಿಗೆ ಈ ಮಹತ್ಮೆ ಬಾರದೆಂದು ವೇದಾಭಿಮಾನಿತ್ವವು ಅವಾಂತರ ದಲ್ಲಿ ನಿಮಗೆ ಕೊಡುವದು. ಇದು ಸತ್ವ ತಮೋಗುಣದ ವಿಕಾರ. ಅಹಂ ಕಾರ ತತ್ವ ಸಮಾಪ್ತ.

ಮನಸ್ಸಿಗೆ ಬುದ್ಧಿಗೆ ಹೆಚ್ಚು ಕಡಿಮಿ ಅದೆ ಶಾಸ್ತ್ರದಲ್ಲಿ ಹೇಳಥಾರೆ. ಕೇಳಿದಾಕ್ಷಣಕ್ಕ ಒಡಂಬಡೋಣ ಮನಸ್ಸು, ವಿಚಾರಿಸಿ ಒಡಂಬಡೋ ಣವು ಬುದ್ಧಿ. ಸತಿ ಪುರುಷರಿಗೆ ಇದು ಹೆಚ್ಚು ಕಡಿಮಿ. ಪತಿಗಳಕಿಂತಲೂ ಇವರು ದಶಗುಣ ನ್ಯೂನರು. ವಿಜಾತಿಗುಣ ಅನಂತಾಂಶದಿಂದ ನ್ಯೂನರು ಎಂಬೋದು ಇಲ್ಲಿಗೆ ಸಮಾಪ್ತ.

## ರಜಸತ್ವ ಗುಣದ ಸೃಷ್ಟಿ ಮನಸ್ತತ್ವ

ಅಹಂಕಾರ ತತ್ವದ್ವಾರ ಹಾಗೆ ತದಭಿಮಾನಿ ಇಂದ್ರಕಾಮರು ಇಂದ್ರಿಯಾಭಿಮಾನಿ ದೇವತೆಗಳು ಹತ್ತುಜನ. ಮಿತ್ರನಾಮಕ ಸೂರ್ಯ ಪರಿಯಂತರವು ಇದರೊಳಗೆ ಒಬ್ಬರನ್ನ ಹೇಳಿದರೆ ಅವರ ಸಮಾನ ಬಲ ರನ್ನು ತಿಳಿಯತಕ್ಕದ್ದು. ರಜಃ ಸತ್ವಗುಣದೊಳಗೆ ಸೃಷ್ಟರಾದವರೊಳಗೆ **ಇಂದ್ರಕಾಮರು ಶ್ರೇಷ್ಠರು.** ಮನಸ್ಸಿಗೆ ಅಭಿಮಾನಿಗಳು. ಇವರು ರುದ್ರದೇವರು. ಪಾರ್ವತೀದ್ವಾರ ಉತ್ಪನ್ನರಾದವರು. ರುದ್ರದೇವರು ಮೂರು ರೂಪ ಧರಿಸಿ ರಜಃ ಸತ್ವಗುಣದ ಸೃಷ್ಟಿಗೆ ವೈಕಾರಿಕರೂಪ ಧರಿ ಸಿದ. ರಜೋರಜಗುಣದ ಸೃಷ್ಟಿಗೆ ತೈಜಸರುದ್ರ. ರಜಃಸ್ತಮದ ಗುಣದ ಸೃಷ್ಟಿಗೆ ತಾಮಸ ರುದ್ರ. ಇವರೊಳಗೆ

## ಇಂದ್ರಕಾಮರು

ವೈಕಾರಿಕ ರುದ್ರದೇವರಿಂದ ಉತ್ಪನ್ನರು ಉಭಯರೊಳಗೆ ಸತ್ಕ ರ್ಮಾನುಷ್ಠಾನ ಮಾಡುವಂಥ ಮನಸ್ಸಿಗೆ ನಿಯಾಮಕರು ಇಂದ್ರದೇವರು ವಿಹಿತ ಭೋಗ ಇಂದ್ರಿಯಗಳದ್ವಾರ ಸಾಪೇಕ್ಷಿತ ಅನುಭೋಗಿಸಬೇಕೆಂಬ ಮನಸ್ಸಿಗೆ ಕಾಮದೇವರು. ಈ ಉಭಯ ಮನಸ್ಸಿಗೆ ಇಂದ್ರಿಯಸಾಪೇ ಕ್ಷಿತ ದಶೇಂದ್ರಿಯಾಭಿಮಾನಿ ದೇವತೆಗಳು ರಜಃಸತ್ವ ಗುಣದ ವಿಕಾರದಿಂದ ವಿಕಾರವಾದ ಶರೀರವುಳ್ಳವರು. ಇವರೊಳಗೆ ಒಬ್ಬರು ಬಂದರೂ ಅವ ರನ ಸರಿ ಇದ್ದವರನ್ನ ಸರ್ವವೂ ತಿಳಕೋಬೇಕು. ಇವರು ಮಿತ್ರನಾಮಕ ಸೂರ್ಯನ ಪರಿಯಂತರವೂ ನಾರದ ಭೃಗು ವಿಶ್ವಾಮಿತ್ರ ವಶಿಷ್ಠಾದಿ ಋಷಿಗಳು ವೈವಸ್ವತ ಮನು ಸರ್ವರೂ ರಜಸ್ಸತ್ವಗುಣದಿಂನ ಉತ್ಪನ್ನರು ಇವರ ಸ್ವಭಾವ ಏನು ಎಂದರೆ, ಯಥಾನುಶಕ್ತಿ ಪರಮಾತ್ಮ ಪ್ರೇರಿಸಿದ್ದು ಬರಿಯಲ್ಪಡುತ್ತದೆ. ಯಥಾನುಶಕ್ತಿ ಪರಮಾತ್ಮನ ಪ್ರಸಾದದಿಂದ ವೇದ ದೃಷ್ಟರು ಅಪರೋಕ್ಷ ಜ್ಞಾನಿಗಳು ಕಲ್ಪಾಂತರಗಳಲ್ಲಿ ಅಪರೋಕ್ಷವುಳ್ಳ ವರು.ಇವರು ಸ್ವರೂಪ ಸ್ವಭಾವತಾ ದೇವತಾಪದಸ್ಥರು. ಇವರ ಕಾಮ, ಪರಮಾತ್ಮನ ಸಂಕಲ್ಪಾನುಸಾರ ಇರುತ್ತದೆ. ಸಂಕಲ್ಪಮೀರಿ ಬಯಸುವ ದಿಲ್ಲ. ತತ್ಪ್ರಯುಕ್ತ ಇವರು ಪರಮಾತ್ಮಗೆ ಮಹಾ ಪ್ರೀತ್ಯಾಸ್ಪದರು. ಇವರು ಸ್ವಭಾವತಃ ಪದಸ್ಥರು.

**ಇನ್ನು ರಜೋರಜ ಗುಣದಿಂದ ವಿಕಾರ ಶರೀರವುಳ್ಳವರು** ವಿಷ್ವಕ್ಸೇನ ಗಣೇಶ ಕುಬೇರ ಸಮಗ್ರ ಕರ್ಮಜ ದೇವತೆಗಳು **ದಶೇಂದ್ರಿಯಗಳ ಉತ್ಪನ್ನ** ಇವರು ಕರ್ಮಮಾಡಿ ಪರಮಾತ್ಮನ ಪ್ರೀತಿ ಸಂಪಾದಿಸಿದ ದೇವತಾ ಪದದವರು ಸ್ವಾಭಾವಿಕವಾದದ್ದುವಲ್ಲ. ಇವರಿಗೆ ಇಂದ್ರಿಯಾಭಿಮಾನಿತ್ವವಿಲ್ಲ. ಇವರೊಳಗೆ ಭೂತಾಭಿಮಾನಿಗಳು ಕರ್ಮಾಭಿಮಾನಿಗಳು ಇದ್ದಾರೆ. ರಜಃ ತಮೋಗುಣದಿಂದ ಆಕಾಶ ತದ್ವಾರ ವಾಯು ತದ್ವಾರ, ತೇಜೋ ತದ್ವಾರ, ಅಪ್ಪು ತದ್ವಾರ, ಪೃಥಿವೀ ತದ್ವಾರ, ಈ ಭೂತಗಳು ಒಂದರಿಂದೊಂದು ದಶಮಡಿ ನ್ಯೂನವಾಗಿವೆ.

ಈ ಜಡದಸೃಷ್ಟಿ ಆಜಾನುಜ ದೇವತೆಗಳ ಆರಂಭಮಾಡಿ ಮನುಷ್ಯ ಗಂಧರ್ವ ಪರಿಯಂತರವೂ ಇದರೊಳಗೆ ತಾರತಮ್ಯಾನುಸಾರ ಮತ್ತೆ ಸತ್ವರಜಃಸ್ತಮ ವಿಭಾಗ ಉತ್ತಮ ನೀಚರಲ್ಲಿ ಹಂಚಿ ತಿಳಕೋಬೇಕು. ಇವರಿಗೆ ಅಭಿಮಾನವು ಇಲ್ಲ. ದೇವತೆಗಳ ಮಾನ (ಮನ) ನಾದ್ಯ ಹೇಳೋಣ ಮಿತಿ ಇಲ್ಲದ ಭೋಗಕ್ಕ ನಾನುಕೂಲರಾಗಿ ದೇವತೆಗಳ ಪ್ರೀತಿ ಬಡಿಸುಥಾರೆ. ರಜೋಗುಣ ಸೃಷ್ಟಿಗೆ ಪುಷ್ಕರನೇ ಕಡೇಲಿ ರಜಸ್ತಮೋಗುಣಗಳಲ್ಲಿ ವಿಭಾಗಮಾಡಿ ತಿಳಿಯಲಿಕ್ಕ ತಕ್ಕದ್ದು.

ಇನ್ನು ರಜಃ ಸತ್ವದ ಸೃಷ್ಟಿಯೊಳಗೆ ಶ್ರೇಷ್ಠೋತ್ತಮರಾದ ಇಂದ್ರ ಕಾಮರ ಸ್ವಭಾವ. ನಾವು ಹುಟ್ಟಿದಮ್ಯಾಲೆ ಪರಮಾತ್ಮನ ತತ್ವ ಉಪದಿಷ್ಟರಾಗಿ ಆರಾಧನೆ ಮಾಡೇವು ಎಂದರೆ ಸರ್ವಥಾ ಮನಸ್ಸು ವೈರಾಗ್ಯಕ್ಕೆ ಒಡಂಬಡದಲೇ ಹೋದರೆ ಆ ಗುರುಗಳು ಹೇಳಿದಕ್ರಮ. ಎಲ್ಲೆಲ್ಲಿ ಮನಸ್ಸು ಹರದರೂ ತವಕ್ರೀಯಾದಲ್ಲ್ಯಾದರೂ ಅಲ್ಲಲ್ಲೇ ಪರಮಾತ್ಮ ತದಾಧಾರನಾಗಿದ್ಧಾನೆಂದು ತಿಳಿದು ಆ ಭೋಗಗಳನ್ನು ಸರ್ವಾಂತರ್ಯಾಮಿ ಪರಮಾತ್ಮಗೆ ಸಮರ್ಪಣೆ ಮಾಡಿದರೆ ಅದೇ ಪರಮಾತ್ಮನ ಪೂಜಾ ಯಜ್ಞವಾಗುತದೆ ಎಂದು ಉಪಾಸನೆ ಮಾಡಲಾಗಿ, ಹಾಗೆ ಸರ್ವ ಸ್ಥಳಗಳಲ್ಲಿ ಸರ್ವ ಭೋಗಗಳಲ್ಲಿ ಸರ್ವ ಮನೋವೃತ್ತಿ ಸರ್ವೇಂದ್ರಿಯಗಳಲ್ಲಿ ಇಂ-ದ್ರಿಯ ವ್ಯಾಪಾರಗಳಲ್ಲಿ ಪರಮಾತ್ಮನೇ ಸರ್ವಸ್ವಾಮಿ ಸ್ವತಂತ್ರ ಸರ್ವಕರ್ತೃ ಎಂದು ಉಪಾಸನೆ ಮಾಡಲಾಗಿ ಪರಮಾತ್ಮ ಪ್ರತ್ಯಕ್ಷನಾಗಿ ನಿಮ್ಮ ಧ್ಯಾನಕ್ಕೆ ಮೆಚ್ಚಿದೆನೆಂದು ಹೇಳಿ ವೇದದೃಷ್ಟನಾಗೋಹಾಗ ಅನುಗ್ರಹ

ಮಾಡಿ ನೀವು ಹೀಗ ಮನಸ್ಸು ನನಗೆ ಸಮರ್ಪಣೆ ಮಾಡಿ ನನ್ನನ್ನೇ ಚಿಂತನೆಮಾಡಿದಿರಾದಕಾರಣ ಲೋಕದಲ್ಲಿ ನೀವು ಸರ್ವರ ಮನಸ್ಸಿನಲ್ಲಿ ವಾಸಮಾಡಿದ್ದು ದಾರು ಹೀಗೆ ತಾವು ಭೋಗಬಟ್ಟದ್ದು ಎಲ್ಲಾ ನನಗೆ ಸಮರ್ಪಣಮಾಡಬೇಕೆಂಬ ಇಚ್ಛೆಯಾದರೆ ಅದು ಅವರಿಗೆ ನಿಮ್ಮ ಪ್ರಸಾದವಾದರೆ ಬರಲಿ. ಇಲ್ಲವೇ ಬ್ಯಾಡವೆಂದು ವರ ಕೊಟ್ಟ. ಮುಂದೆ ನಿಮಗೆ ಭೋಗಾರ್ಥ ಸ್ವರ್ಗ ಕೊಡಥೀನಿ ಶತಮುಖ ಮಾಡು ಎಂದು ಪರಮಾತ್ಮ ಹೇಳಿ ಮನೋಭಿಮಾನಿತ್ವ ಕೊಟ್ಟನು. ಭಗವದ್ಭಕ್ತರ ಸೇವಾರ್ಥ ಪರಮಾತ್ಮನ ಪ್ರೀತ್ಯರ್ಥ ಸಂಪತ್ತು ಬಯಸಿ ಸತ್ಕರ್ಮ ಮಾಡೋ ಮನಸ್ಸಿಗೆ ಇಂದ್ರಿಯಾಭಿಮಾನಿತ್ವ ಇಟ್ಟು, ಭೋಗಾರ್ಥ ಸಮರ್ಪಣ ಮಾಡೋ ಮನಸ್ಸಿಗೆ ಕಾಮಾಭಿಮಾನಿ. ಇವರು ಉಮಾದೇವೇರ ಕಿಂತಲೂ ದಶಗುಣ ನ್ಯೂನರು. ತತ್ಕಾರಣ ಇವರು ಅವಿಹಿತಭೋಗ, ಅವತಾರಗಳಲ್ಲಿ ಬಟ್ಟರೂಸರಿಯೆ ಇವರಿಗೆ ಅದು ಕೇವಲ ಪಾಪವಿಲ್ಲ. ಪರಮಾತ್ಮನೇ ಕರ್ತೃ ಎಂಬ ನಿರ್ಧಾರ ಅತಿ ನಿಸಿತ ಮನಸಿಗೆ ಒದಗತಿದ್ದ ಕಾರಣ ಪಾಪದೂರರು ಇವರು ಅಪರೋಕ್ಷ ಜ್ಞಾನಿಗಳು. ಈ ಸಂಪತ್ತು ೩೯ ಕಲ್ಪಸಾಧನನಂತರ ನಾಲ್ವತ್ತನೇ ಕಲ್ಪಕ್ಕೆ ಸಾಧ್ಯವಾದದ್ದು. ಇಪ್ಪತ್ತು (೨೦) ಕಲ್ಪವಾಯಿತು ಅಪರೋಕ್ಷವಾಗಿ ಕಾಮಾಪೇಕ್ಷಿಸಿ ಸತ್ಕರ್ಮಾನು ಷ್ಠಾನ ಮಾಡೋ ಮನಸ್ಸಿಗೆ ಇಂದ್ರನೇ ಕಾರಣ. ಭೋಗ ಸಮರ್ಪಣೆಗೆ ಕಾಮಾಭಿಮಾನಿ ಯಾಕಂದರೆ ಪೂರ್ವದಲ್ಲಿ ಇಂದ್ರನಸ್ವರ್ಗ ಸರ್ವಜನರಿಗೆ ಭೋಗಕ್ಕ ಕಾರಣ. ಭೋಗ ತೃಷ್ಣಿಗೇ ಅವಧಿ ಇಲ್ಲಾ. ಅಪೇಕ್ಷಿಗೆ ಅಂತಿ ಇಲ್ಲವೆಂದು ಗುರುಗಳನ ಕೇಳಿದರೆ ಇದು ನಿನ್ನ ಪ್ರಾರಬ್ಧ ಬಿಟ್ಟದ್ದಲ್ಲ. ಬಯಸಿದರೆ ಪಾಪವಿಲ್ಲ. ಸರ್ವಜನರಿಗೆ ಯುಕ್ತವಾದೀತು ಅದರಿಂದ ಪರಮಾತ್ಮ ಪ್ರೀತನಾಥಾನು. ಸ್ವರ್ಗಾರ್ಥ ಯಜ್ಞಮಾಡಿ, ಭೋಗ ಸಂಪಾದಿಸಿ ಭೋಗ ಪಟ್ಟದ್ದೆಲ್ಲ ಆಗಲೂ ಪರಮಾತ್ಮಗೆ ಸಮರ್ಪಣೆಮಾಡು ಎಂದು ಹೇಳಿದ್ದಕಾರಣವಾಗಿ ಅದೇ ಹೀಗೆ ಪರಮಾತ್ಮನು ವರ ಕೊಟ್ಟಿದ್ದಾನೆ. ತತ್ಕಾರಣ ಭೋಗಾರ್ಥ ಸತ್ಕರ್ಮಗಳ ಮಾಳ್ಪರ ಮನಸ್ಸಿಗೆ ಅಭಿಮಾನಿ ಕಾಮನು. ಭೋಗಸಮರ್ಪಣೆಮಾಡಿ ಪರಮಾತ್ಮನ ಅಪರೋಕ್ಷಾನಂತರ ವಿಧಿಗಳು ತಾಳಲಾರದೇ ಕದಾಪಿ ನಿನ್ನ ವಿಸ್ಮೃತಿ ಬಂದರೆ

ನಾನು ಕೆಟ್ಟೇನು ? ಭೋಗ ಅತಿಶಯದಿಂದ ನಿನ್ನ ಮರಥೇನು. ಇದು ತಾಳಲಾರದೆ ದಯಮಾಡೆಂದು ಬೇಡಿಕೊಳಲಾಗಿ ಪರಮಾತ್ಮ ದಯಮಾಡಿ ಚಕ್ರಾಭಿಮಾನಿ ಪದಕೊಟ್ಟ. ಈ ಪದ ನಿನ್ನ ಕೆಡಸದೆಂದು ಹೇಳಿ, ನೀನು ಸರ್ವಾಂತರ್ಯಾಮಿಯಾಗಿ ನಿನ್ನ ಮರತವರ ಶರೀರದಲ್ಲಿ ನಿನ್ನ ಭೋಗ. ಅವರ ಶರೀರದ್ವಾರ ಭೋಗಿಸು ನಿನಗೆ ಪಾಪವಿಲ್ಲ- ಅವರಿಗೆ ಪಾಪ ಬರುತದೆಂದು ಇಂಥಾ ವರ ಪರಮಾತ್ಮ ಕೊಟ್ಟ ಪ್ರಯುಕ್ತ ಲೋಕ ದಲ್ಲಿ ಸರ್ವ ಪ್ರಾಣಿಗಳಿಗೂ ಕಾಮೋಪದ್ರವ ಉಂಟು ಆತನ ಪ್ರಸಾದ. ಸಂಪಾದಿಸಿದರೆ ಅವರ ಶರೀರದಲ್ಲಿ ಭೋಗಬಡಲಿಕ್ಕ ಬಾಹೋದಿಲ್ಲ ಅಥವಾ ಬಂದಕಾಲಕ್ಕೂ ತಾನು ಈ ರೀತಿಯಲ್ಲಿ ಸಮರ್ಪಣ ಮಾಡಿದರೆ ಕಡೆ ಬೀಳಥಾನೆ. ಅದು ಇವಗೆ ಜ್ಞಾನಕೊಟ್ಟು ಉದ್ಧರಿಸುಥಾನೆ. ಸರ್ವದಾ ಪರಮಾತ್ಮಗೆ ಭೋಗ ಸಮರ್ಪಿಸೋದೆ ರಜಃ ಸತ್ವಸತ್ವಗುಣದ ಸ್ವಭಾವ.

ಹೀಗಾದರೆ ಇವರಿಗೆ ರಜೋಗುಣದ ದೋಷ ಏನುಎಂದರೆ ವೈರಾಗ್ಯ ಸಹಿಸದಿಹೋದು. ವ್ಯಭಿಚಾರಗಳನ್ನು ಮಾಡೋಣ. ಅವತಾರಾದಿಗಳಲ್ಲಿ ಹರಿಗುರುಗಳ ಸ್ವರೂಪ ಮರೋಣ. (ಮರಿಯೋಣ) ತಮ್ಮ ಪದಾಪೇಕ್ಷಿಗೆ ಪರಮಾತ್ಮಗೆ ಮೊರೆ ಹೋಗೋಣ. ದಾರಾದರೂ ಪದ ಕಸಕೊಂಡಾರೊ ಎಂದು ದಿಗಿಲು ಬೀಳೋಣ. ಇದಷ್ಟು ರಜೋಗುಣದ ದೋಷ. ಹನು ಮಂತ ದೇವರನ ವಾಲಿ ಅನುಸರಿಸಲಿಲ್ಲ. ಕೃಷ್ಣಾವತಾರದಲ್ಲಿ ಇಂದ್ರ ಗರುವತನದಿಂದ ಮಳೆಗರೆದ. ತಿಳಿದಾನಂತರ ಪಾರಿಜಾತ ವೃಕ್ಷಗೋಸ್ಕರ ಯುದ್ಧಕ್ಕ ಬಂದದ್ದು ಇವೇ ಮೊದಲಾದವು ಪರಮಾತ್ಮಗೆ ಪ್ರೀತ್ಯಾಸ್ಪದರು ಸಮಸ್ತ ದೇವತಿಗಳೊಳಗೆ ಶ್ರೇಷ್ಠರು. ರುದ್ರ ಪಾರ್ವತೀಕಿಂತ ನೀಚರು ಎಂದು ತೋರಿಸುವದೇ ರಜಃ ಸತ್ವ ಸತ್ವ ಮಹತ್ಮೆ ಹೇಳಿದೆವು. ಇದು ಇಂದ್ರಕಾಮರ ಪ್ರಕರಣ. ಹೀಗೆ ಬಹು ರೀತಿಯಲಿ ಕಾಮದೇವರು ಮೊರೆ ಇಟ್ಟಕಾರಣ ಚಕ್ರಾಭಿಮಾನಿತ್ವ ಅವತಾರಗಳಲ್ಲಿ ಅತಿ ವೈರಾಗ್ಯ ಮಾಳ್ಪ ದನ್ನು ಪ್ರಸಾದ ಪರಮಾತ್ಮ ಮಾಡಿದ್ಧಾನೆ. ಕಾಮಾವತಾರ ಸನಕಾದಿಗ ಳೊಳಗೆ ಸನತ್ಕುಮಾರನು. ಈತನಲ್ಲಿ ಸನತ್ಕುಮಾರನ ಆವೇಶ ದೇವತೆ ಗಳ ನಿಮಿತ್ಯ ತನ್ನ ಶರೀರ ಯಾತನಾಕ್ಕ ಒಡಂಬಟ್ಟು ರುದ್ರದೇವರಿಂದ ಮೃತನಾದ. ಸ್ಕಂದನಾಗಿ ವಿವಾಹವಾಗದಲೆ ಅದ್ಯಾಪಿ ಭೂಮಿಮ್ಯಾಲೆ

ಸಂದರುಶನ ಸ್ತ್ರೀಯರಕೂಡ ಮಾಡಥಾಂಗೆ ಶಾಪಕೊಟ್ಟ. ಭರತರಾಯು ನಾಗಿ ರಾಮದೇವರು ಬಾಹೋತ್ತನಕ ಅತಿ ತೀಕ್ಷಣ ವೈರಾಗ್ಯಮಾಡಿದ್ಧಾ ನೆಂಬೋದು ಶಾಸ್ತ್ರಸಿದ್ಧ. ಇಷ್ಟು ಪರಮಾತ್ಮನ ಪ್ರಸಾದವಿನಹ ಬಾರ ದೆಂದು ಹೀಗೆ ಪೂರ್ವದಲ್ಲಿ ಪರಮಾತ್ಮನ್ನ ವರಾ ಬೇಡಿದ್ಧಾನೆ. ಪರಮಾತ್ಮ ಕೊಟ್ಟಿದ್ಧಾನೆಂದು ತಿಳಿಯಬೇಕು. ಹೀಗಾದರೆ ಈತ ಸರ್ವದಾ ಭೋಗ ಬಡತಿರಬೇಕು. ಅದು ತಪ್ಪಿದ್ದಲ್ಲಾ ಎಂದರೆ ಪರಮಾತ್ಮ ಅದು ತಪ್ಪಥಾಂಗೆ ಮಾಡಿದ್ಧಾನೆ. ಶರೀರ ಅಭಿಮಾನವಿಲ್ಲದೇ ಶರೀರ ಅಭಿಮಾನಿಯಾಗಿ. ಸುಖಬಡೋಣ. ಮಹಾಪುಣ್ಯಾತ್ಮ ಈತನ ಸ್ಮರಣೆ ಮಾಡಿದವರಿಗೆ ಕಾಮ ಬಾಧೆಯಿಲ್ಲ. ರಜಃಸತ್ವಗುಣದ ವಿಕಾರವೆಂದು ತಿಳಿಯಬೇಕು. ಇವರ ಆವಾಸ ಮನಸ್ತತ್ವದಲ್ಲಿ ತಿಳಿತಕ್ಕದ್ದು. ರಜಃಸತ್ವ ರಜೋಗುಣದಿಂದ ಶರೀರ

## ಅಹಂಕಾರಿಕ ಪ್ರಾಣನ ಪ್ರಕರಣ

ರಜಃ ಸತ್ವಗುಣವಿಕಾರದಿಂದ ಶರೀರ ಅಹಂಕಾರಿಕ ಪ್ರಾಣ ಈತನು ಶರೀರಾಭಿಮಾನಿ ಇಂದ್ರನಕಿಂತಲೂ ದಶಗುಣದಿಂದ ನ್ಯೂನ. ಈತಗೆ ಶರೀರಾಭಿಮಾನ ಏನುಕಾರಣಯೆಂದರೆ, ಪರಮಾತ್ಮನಿಂದ ಪ್ರೇರಿತನಾದ ವೈಕಾರಿಕ ರುದ್ರದೇವರು ಇಂದ್ರನದ್ವಾರಾ ಈತನ ಹುಟ್ಟಿಸಿ ಗುರುಗಳಿಂದ ಪರಮಾತ್ಮನ ಆರಾಧನೆ ಮಾಡಿ, ಶೀಘ್ರ ವೇದದರ್ಶನವಾಗಿ ಪರ ಮಾತ್ಮನಲ್ಲಿ ಸ್ವಯೋಗ್ಯವಾದ ದೃಷ್ಟವೇದಾನುಸಾರ ಗುಣೋಪಸಂಹಾರ ಮಾಡು ಎಂದು ಹೇಳಲಾಗಿ ಶರೀರಭೋಗದಲ್ಲೇ ಆಸಕ್ತನಾಗಿ ಸರ್ವಥಾ ಪರಮಾತ್ಮನಲ್ಲಿ ಮನಸ್ಸು ಎರಗದೇ ಹೋದರೆ ಆ ಮ್ಯಾಲೆ ಮತ್ತೂ ಗುರುವಾದಂಥ ಇಂದ್ರನ ಪ್ರಾರ್ಥನ ಮಾಡಿದರೆ ತನ್ನೋಪಾದಿಯಲ್ಲಿ ಬಡುವಭೋಗ ಪರಮಾತ್ಮಗೆ ಸಮರ್ಪಿಸು ಎಂದು ಎನಲು ಅದು ಮನಸ್ಸಿಗೆ ಹತ್ತದೇ ಹೋದರೆ ಶರೀರಾಭಿಮಾನಬಿಟ್ಟು ನಿಸ್ಸಂಗನಾಗಿ ಏಕಾಂತ ದಲ್ಲಿದ್ದು ಸೀತೋಷ್ಣಾದಿಗಳಿಗೆ ಚಿಕಿತ್ಸಾ ಮಾಡದಲೇ ಪರಮಾತ್ಮನ ಒಲಿ ಸಿದರೆ ಸ್ವಯೋಗ್ಯತೀ ಸಾಮ್ರಾಜ್ಯ ಲಾಭವಾದೀತೆಂದು ಎನಲು ಹೀಗೆ ಶೀತೋಷ್ಣಲಾಭ ಸುಖ ದುಃಖ ಜಯಾಪಜಯಗಳಲ್ಲಿ ಏಕಪ್ರಕಾರ ತಿಳಿದು ಪರಮಾತ್ಮನಾಧೀನನಾಗಿ ಇರಲಿಕ್ಕ ಪರಮಾತ್ಮ ಇವನ ಭಕ್ತಿಗೆ ಮೆಚ್ಚಿ,

ಪ್ರತ್ಯಕ್ಷನಾಗಿ ಸ್ವಯೋಗ್ಯ ವೇದಾನುಭವ ಮಾಡಿಕೊಟ್ಟು ವೇದಾನುಸಾರ ಗುಣಗಳಿಂದ ಪರಮಾತ್ಮ ಸ್ತುತ್ಯನಾಗಿ ನೀನು ಪಾಪನಿಮಿತ್ಯ ಶರೀರಾಭಿಮಾನ ಬಿಟ್ಟಿದ್ದಿಯೋ ಆ ಕಾರಣ ನೀನು ಸರ್ವರ ಶರೀರಕ್ಕ ಅಭಿಮಾನಿಯಾಗಿ ತ್ವಗೀಂದ್ರಿಯದಲ್ಲಿ ವಾಸಮಾಡು. ದಾರು ಭಗವದ್ಭಕ್ತರೋ ಕ್ರಮಾತ್ ತಾರತಮ್ಯ ತಿಳಿದವರೋ, ಹೀಗ ಆರಾಧನೆಮಾಡಿ ನಿನ್ನ ಮೆಚ್ಚಿಸಿ ತ್ವಗೀಂದ್ರಿಯಾಭಿಮಾನಿತ್ವ ಸಾಮ್ರಾಜ್ಯ ನೀನು ಪಡದಿದ್ದಿ ಶರೀರಾಭಿಮಾನ ಬಿಡಿಸಿ ಭಕ್ತಿ ಹುಟ್ಟಿಸುಯೆಂದು ಹೇಳಿದರು. ಈಗ ಮ್ಯಾಲೆ ಹೇಳಿದ ಪ್ರಕಾರಕ್ಕ ವಿಪರೀತ ಹುಟ್ಟಿಸುಯೆಂದು ಹೇಳಿದಪ್ರಕಾರಕ್ಕ, ವಿಪರೀತ ಹುಟ್ಟಿಸು ಎಂದು ಹೇಳಿದ ಪರಮಾತ್ಮನಲ್ಲಿ ಭಕ್ತಿಮಾಡಿ ಶರೀರಾಭಿಮಾನ ತ್ಯಾಗವಾಗೋನಿಮಿತ್ತ ಅಹಂಕಾರಿಕ ಪ್ರಾಣನ ಮೊರೆ ಹೋಗತಕ್ಕದ್ದು. ಅಧಿಕಾರಿಗಳು ಈತನ ಪ್ರಸಾದ ಸಂಪಾದಿಸದೇ ಹೋದರೆ ದಾರಿಗ್ಯೂ ಶರೀರಾಭಿಮಾನ ಬಿಡದು. ಹೀಗ ಪರಮಾತ್ಮನ ವರವಿದ್ದಕಾರಣ ತಿಳಕೋಬೇಕು. ಇನ್ನು ರಜಃ ಸತ್ವ ತಮೋಗುಣದಿಂದ ವಿಕಾರ ಶರೀರವುಳ್ಳವರು ಅನಿರುದ್ಧ ಬೃಹಸ್ಪತಿ ಸ್ವಾಯಂಭುವ ಮನು, ದಕ್ಷಪ್ರಜೇಶ್ವರ ಶಚೀ ರತೀ ಇವರು ಆರುಮಂದಿ ಅಹಂಕಾರಿಕ ಪ್ರಾಣನಕಿಂತ ದಶಗುಣದಿಂದ ನ್ಯೂನರು. ಈ ಆರುಜನರು ಸಮಾನರು. ಇವರೊಳಗೆ

## ಶಚಿ ರತಿ ದೇವೇರ ಪ್ರಕರಣ

ಶಚಿ ರತಿ ದೇವೇರು ತಮ್ಮ ಪತಿಪುಣ್ಯಪ್ರಭಾವದಿಂದ ಪತ್ಯಂತರ್ಗತ ಭಗವಂತನ ಆರಾಧನೆಮಾಡಿ ಪತಿಗಳದ್ವಾರ ಪರಮಾತ್ಮನ್ನ ಐದಿದರು. ಇವರು ವೇದದೃಷ್ಟರು. ಸರ್ವದಾ ಪತ್ಯಂತರ್ಗತ ಪರಮಾತ್ಮನ್ನ ಸ್ವಯೋಗ್ಯ ವೇದೋಕ್ತ ಗುಣೋಪಸಂಹಾರದಲ್ಲಿ ನಿಪುಣರು. ಇವರು ಲೋಕದದೃಷ್ಟಿಗೆ ಅವತಾರಗಳಲ್ಲಿ ಒಂದು ಕುಂದಾಂಶ ಕಂಡಕಾಲಕ್ಕೂ ದೋಷ ದೂರರೆಂದು ತಿಳಿಯಬೇಕು. ಅಪರೋಕ್ಷ ಜ್ಞಾನಿಗಳು ಇವರು.

## ಅನಿರುದ್ಧನ ಪ್ರಕರಣ

ಅನಿರುದ್ಧ ಉಪದಿಷ್ಟನಾಗಿ ಪರಮಾತ್ಮನ ಆರಾಧಿಸೇನಂದರೆ ಮನಸ್ಸು ಸ್ವಾಧೀನಕ್ಕೆ ಬಾರದೇ ಹೋದರೆ ತಮ್ಮ ಸ್ವಗುರುವಾದ ಕಾಮ

ದೇವರ ಕೇಳಲಾಗಿ ನೀನು ಸರ್ವಥಾ ಶರೀರಾಭಿಮಾನ ಬಡಲಾರಿ. ಕೈಯಿಂದಮಾತ್ರ ಪರಮಾತ್ಮನ ಸೇವೆಹೊರ್ತು ಇನ್ನೊಂದು ಸರ್ವಥಾ ಮಾಡದೇ ಹೋದರೆ ಪರಮಾತ್ಮ ಪ್ರೀತನಾಗಿ ಸ್ವಲಾಭ ಮಾಡ್ಯಾನು ಎನ್ನಲು ಹಾಗೆ ಪರಮಾತ್ಮನ ಪೊಲಿಸಿ ಕೈಯಿಂದ -ಮನಸ್ಸಿನಿಂದ ಸೇವೆ ಮಾಡಿ, ಪರಮಾತ್ಮನ ಅಪರೋಕ್ಷಿಕರಿಸಿ ವೇದದೃಷ್ಟ ಸ್ವಯೋಗ್ಯಾನುಸಾರ ವುಳ್ಳವನಾಗಿ ತತ್ತದ್ಗುಣಗಳು ಪರಮಾತ್ಮನಲ್ಲೇ ಉಪಸಂಹಾರಮಾಡಿದ್ದಲ್ಲಿ ಶಂಖಾಭಿಮಾನಿಯಾಗಿ ಪರಮಾತ್ಮನ ಕೈಸೇರಿದನು. ಇನ್ನು **ವಿಹಿತ ಮತಿ ನೀತಿವುಳ್ಳ ಮನಸ್ಸಿಗೆ ಪ್ರೇರಕನು**

## ದಕ್ಷಪ್ರಜೇಶ್ವರನ ಪ್ರಕರಣ

ದಕ್ಷಪ್ರಜೇಶ್ವರನು ಸ್ವಗುರುವಾದ ಇಂದ್ರನ ಕೇಳಲು ಅನಿರುದ್ಧ ನೋಪಾದೇಲಿ ಹೇಳಲಾಗಿ ಕರದ್ವಾರ ಅತಿ ವಿಚಿತ್ರತರವಾಗಿ ಅನ್ಯ ವಿಷಯ ಸಂಭವಿಸದೇ ಪರಮಾತ್ಮನ ಆರಾಧನೆ ಅತಿ ಸಮೀಚೀನ ಮಾಡಲಾಗಿ ಪರಮಾತ್ಮ ಪ್ರತ್ಯಕ್ಷನಾಗಿ ನೀನು ದಾವ ನಿಮಿತ್ಯ ನಿನ್ನ ಕರಗುಗಳು ನನಗೆ ಸಮರ್ಪಣೆ ಮಾಡಿದೆಯೋ ಅದೇ ನಿಮಿತ್ಯದಿಂದಲೇ ಸಕಲ ಪ್ರಾಣಿಗಳ ಕೈಗೆ ಅಭಿಮಾನಿಯಾಗಿದ್ದು ನನ್ನ ಭಕ್ತರಾಗಿ ಸಮಗ್ರ ತಾರತಮ್ಯತತ್ವಾಭಿ ಮಾನಿಗಳಾದವರನ್ನೂ ಹಿಂದಿನಹಾಗೆ ನಿನ್ನ ಪ್ರಾರ್ಥನೆ ದಾವ ಮಾಡಥಾನೆ ಅವನಿಗೆ ಸ್ವಧರ್ಮಕರ ಸಾನುಕೂಲ ಮಾಡಿಕೊಟ್ಟರೆ ನಿನಗೆ ಒಬ್ಬೊಬ್ಬನಲ್ಲಿ ಯಜ್ಞ ಮಾಡಿದ ಫಲ ಬರುತ್ತದೆ.

ದಾರು ಭಕ್ತರಾಗದೇ ನಿನ್ನ ಮೊರೆ ಹೋಗಲಿಲ್ಲ, ದಾವ ತತ್ವ ವಿಚಾರ ತಿಳಿಯಲಿಲ್ಲ ಅವನಿಂದ ನಷ್ಟ ಪ್ರಯೋಜನ ಮಾಡಿಸಿ ನರಕಕ್ಕೆ ಕೆಡಹಾ ಕೆಂದು ಹೇಳಿರಲು ಸಕಲರ ಕೈಗೆ ಈಗ ದಕ್ಷ ಪ್ರಜೇಶ್ವರನೇ ಸ್ವಾಮಿ. ಬರಿಲಿಕ್ಕ ದಾನಕೊಡಲಿಕ್ಕ ಹಿಡಿಲಿಕ್ಕ ಹೊಡಿಲಿಕ್ಕೂ ಏವಮಾದಿ ಕೈಯಿಂದ ಏನೇನು ಪ್ರಯೋಜನ ಆಗುತವೋ ಸಮಗ್ರಕ್ಕದಕ್ಷ ಪ್ರಜೇಶ್ವರನೇ ಸ್ವಾಮಿ ಇದು ಸರ್ವೇಂದ್ರಿಯಗಳ ಮಧ್ಯದಲ್ಲಿ ತ್ವಗೇಂದ್ರಿಯ ತರುವಾಯದಲ್ಲಿ ಶ್ರೇಷ್ಠವಾದದ್ದು. ಈ ತತ್ವಾಭಿಮಾನಿತ್ವ ಸರ್ವರಿಗೂ ಸುಲಭವಲ್ಲ. ಇದು ಮಹಾ ಸಾಮ್ರಾಜ್ಯ ಭಕ್ತರಿಗೆ ಸೂಕ್ಷ್ಮ ಧರ್ಮ, ಕೈಗೆ ಸಾನುಕೂಲವಮಾಡಿ ಕೊಟ್ಟು ಯಾಗಮಾಡಿಸಿ ದೇವತಾಪ್ರೀತಿ ಬಡಿಸಿ ದಾನವನ್ನು ಮಾಡಿಸಿ

ಸೋತ್ತುಮಜನರ ಪ್ರೀತಿ ಹುಟ್ಟಿಸಿ ಅತಿ ಸಾಧನವನ್ನು ಮಾಡಿಸುತದೆ. ದುಷ್ಟರಿಗೆ ಇದೇ ಕೈಯಿಂದಲ್ಲೇವೆ ಸೋತ್ತುಮರದ್ರೋಹ ಅಪಹಾರಾದಿ ದುಷ್ಟ ಪ್ರಯೋಜನ ಮಾಡಿಸಿ ಕೆಡಸುಥಾನೆ. ತತ್ಪ್ರಯುಕ್ತ ಕೈ ಧರ್ಮಕ್ಕೆ ಸಾನುಕೂಲವಾಗಿ ಬರಬೇಕಾದರೆ ದಕ್ಷಪ್ರಜೇಶ್ವರಗೆ ಮೊರೆಹೊಗಬೇಕು. ಕೈಗೆ ಅಭಿಮಾನಿಯಾದ ಕಾರಣ ಯಜ್ಞದಲ್ಲಿ ಮಹಾ ಪ್ರಸಿದ್ಧನಾದ.

ರಜಃಸತ್ವ ತಮೋಗುಣ ವಿಕಾರವುಳ್ಳ ಕಾರ್ಯ ಯಜ್ಞ ವ್ಯಾಳ್ಯದಲ್ಲಿ ರುದ್ರದೇವರ ದ್ರೋಹಮಾಡಿದ. ಆದರೂ ಅತಿ ಮಹತ್ಮನಾದ ಕಾರಣ ಪುನಃ ಬ್ರಹ್ಮದೇವರ ದಯದಿಂದ ರುದ್ರದೇವರ ಅನುಗ್ರಹ ಸಂಪಾದಿಸಿದ. ಈ ಸಾಮ್ರಾಜ್ಯನಿಸ್ತೋಷಕರಗಳು ಪರಮಾತ್ಮಗೆ ಸಮರ್ಪಿಸದೇ ಹೋದರೆ ಸರ್ವಥಾ ಬಾರದು. ಇದು ದಕ್ಷಪ್ರಜೇಶ್ವರನ ಪ್ರಕರಣ.

ಇನ್ನು ಈತನಗೆ ಸಮಾನ ರಜಃಸತ್ವ ತಮೋಗುಣ ವಿಕಾರದಿಂದ ಶರೀರವುಳ್ಳಂಥಾ

## ಬ್ರಹಸ್ಪತ್ಯಾಚಾರ್ಯರು

ಇವರಿಗೆ ವೈಕಾರಿಕ ರುದ್ರದೇವರದ್ವಾರ ಇಂದ್ರದೇವರಿಂದ ಉತ್ಪತ್ತಿ ಇವರು ಉತ್ಪನ್ನರಾದ ತರುವಾಯದಲ್ಲಿ ಪರಮಾತ್ಮನ ಉಪಾಸನೆಗೆ ಸರ್ವಥಾ ಮನಸ್ಸು ಬಾರದೇ ಹೋದರೆ, ಆಮ್ಯಾಲೆ ತಮಗೆ ಜನಕರಾದ ಸ್ವಗುರುಗಳ ಕೇಳಲಾಗಿ ನಿಮ್ಮ ಅಧಿಕಾರಕ್ಕ ಅನಾಯಾಸ ಪರಮಾತ್ಮನ ಪ್ರಾರ್ಥನಾ ದೊರಿಯದು. ನಿಮ್ಮೋಪಾದೆಯಲ್ಲಿ ಆರಾಧನಿಗೆ ಪ್ರಯಾಸ ಬಟ್ಟಿದ್ಧೇವೆ. ನಿಮಗೆ ತಕ್ಕ ಉಪಾಯ ಹೇಳಥೇವೆಂದು ಹೇಳಿದಪ್ರಕಾರ.

ನೀವು ಏನೇನು ವೈದಿಕ ಲೌಕಿಕ ಶಬ್ದಾನುದಿಂದೊಂದೇಅಲ್ಲ ಸ್ವ ಶಬ್ದದಿಂದಲೂ ಸಹವಾಗಿ ಪರಮಾತ್ಮನನ್ನೇ ಅವು ಕೊಂಡಾಡುತವೆ ಎಂದು ಸಮನ್ವಯ ಮಾಡುತಿದ್ದರೆ, ಆದರಿಂದ ಪರಮಾತ್ಮ ಪ್ರೀತನಾಗಿ ಪ್ರತ್ಯಕ್ಷನಾಗಿ ನಿನ್ನ ತಕ್ಕ ವೇದ ದೃಷ್ಟಿಗೆಹಾಕಿ, ತದುಕ್ತ ಗುಣೋಪಸಂಹಾರ ಮಾಡಿಸಿಕೊಂಡು ನಿಮ್ಮಗೆ ಕೊಡತಕ್ಕ ಅಧಿಕಾರ ಕೊಡತಾನೆಂದು ಹೇಳಲಾಗಿ ಹಾಗೆ ಗುರುಭಕ್ತಿ ಅನುಸರಿಸಿ ಘರ್ಘರಾದಿಶಬ್ದ ಮೊದಲಾಗಿ ಪರಮಾತ್ಮನಲ್ಲೇ ಸಮನ್ವಯ ಮಾಡುತ್ತ ತದೇಕ ನಿಷ್ಠರಾಗಿ ಒಂದು

ಶಬ್ದಕ್ಕ ಅನ್ಯತ್ರ ಗ್ರಹಿಸದಲೇ ಸರ್ವ ಶಬ್ದಕ್ಕ ತತ್ಪ್ರತಿಪಾದಕ, ತತ್ಪ್ರತಿಬಿಂಬ, ತತ್ಪ್ರತೀಯಮಾನ ಜಗತ್ತು, ತದಾಧೀನ ತಚ್ಛಬ್ದವಾಚ್ಯ ಪರಮಾತ್ಮ ಅನನ್ಯಾಧಾರ, ಸರ್ವಜ್ಞ, ಅತಿ ಸೂಕ್ಷ್ಮ ಜಗದ್ವಿಲಕ್ಷಣ ಹೀಗೆಂಬು ಸಮನ್ವಯ ಮಾಡುತಿರಲಾಗಿ ಪರಮಾತ್ಮ ಪ್ರತ್ಯಕ್ಷನಾಗಿ ವೇದದೃಷ್ಟಿಗೆ ಹಾಕಿ ತದುಕ್ತ ಗುಣಗಳಿಂದ ಉಪಾಸ್ಯನಾಗಿ ಆತನಿಂದ ಸ್ವರ ವ್ಯಂಜನ ಭೇದದಿಂದಲೂ ಪ್ರತಿಪಾದಿಸಿಕೊಂಡು ಪ್ರಸನ್ನನಾಗಿ ಪರಮಾತ್ಮ ವರ ಕೊಟ್ಟಿದ್ದು.

ನೀನು ಸರ್ವ ಶಬ್ದಗಳು ನನ್ನಲ್ಲೇ ಸಮನ್ವಯ ಮಾಡಿದ್ದರಿಂದ ದಿನೆದಿನೇ ಶಬ್ದಾಭಿಮಾನಿಯಾಗು. ದಾರು ಭಗವದ್ಭಕ್ತರಾಗಿ ನೀನು ಶಬ್ದಾಭಿಮಾನಿಯೆಂದು ತಿಳಿದು ಪ್ರಾರ್ಥನ ಮಾಡಿದವರಿಗೆ ನಿನ್ನಹಾಗೆ ಸರ್ವಶಬ್ದ ಸಮನ್ವಯ ಮಾಡೋ ಅಧಿಕಾರ ಹುಟ್ಟಿಸು. ಇಲ್ಲದಿದ್ದರೆ ಈ ಜ್ಞಾನ ಬ್ಯಾಡಾ ಎಂದು ಹೇಳಲಾಗಿ, ನೀನು ಶಬ್ದಾಭಿಮಾನಿಯಾಗು. ಹಾಗೇ ದೇವತಾಗುರುವಾಗು. ನೀನು ಶಬ್ದ ಸಮನ್ವಯದಲ್ಲಿ ಮಹಾ ನಿಪುಣನಾಗಿ ನನ್ನ ವೊಲಿಸಿದ್ದಕ್ಕ ಈ ವರಾ ಕೊಟ್ಟೆಯೆಂದನು.

ಈಗ ದಾರಿಗಾದರೂ ಸರ್ವ ಶಬ್ದ ಪರಮಾತ್ಮನಲ್ಲಿ ಸಮನ್ವಯ ಮಾಡಲಿಕ್ಕ ಬರಬೇಕಾದರೆ ಗುರುಗಳ ಪ್ರಾರ್ಥನೆಮಾಡಿ ಇವರ ಪ್ರಸಾದ ದಿಂದ ಐದಬೇಕು.

ಇವರಿಗೆ ರಜಃಸತ್ವ ತಮೋಗುಣದ ಕಾರ್ಯವೇನಂದರೆ ಚಂದ್ರ ಸ್ಪರ್ಶ ಮಡದಿಗೆ ಆದುದಕ್ಕೆ ಕೆಲವಕಾಲ ಚಿಂತಿಸಿದ್ದು. ಅವತಾರದಲ್ಲಿ ದ್ರೋಣಾಚಾರ್ಯರು ದುರ್ಯೋಧನನ ಪಕ್ಷಪಾತ ಮಾಡಿದ್ದೇ ತಿಳಿಯ ತಕ್ಕದ್ದು. ಇದು ಗುರುಗಳ ಪ್ರಕರಣ. ಇನ್ನು ಸ್ವರ ವ್ಯಂಜನದಿಂದಲ್ಲ್ಯಾ ಪರಮಾತ್ಮನೇ ಮುಖ್ಯ ಪ್ರತಿಪಾದ್ಯನೆಂದು ತಿಳಿಯೋಣ. ಸಾಕಲ್ಯ ಇವರಿಗೇ ಸರಿ. ತತ್ಪ್ರಯುಕ್ತ ಶಬ್ದಾಭಿಮಾನಿಗಳು ಒಂದು ಸ್ವರವ್ಯಂಜನಕ್ಕೂ ಅನ್ಯತ್ರ ಪ್ರತಿಪಾದಿಸರು ಎಂದು ತಿಳಿತಕ್ಕ ಕಾರಣ ದೇವತೆಗಳ ಗುರುಗಳು.

## ಸ್ವಾಯಂಭು ಮನುವಿನ ಪ್ರಕರಣ

ಈತನು ರಜಃಸತ್ವ ತಮೋಗುಣದಿಂದ ವಿಕಾರ, ರುದ್ರದೇವರಿಂದ ಇಂದ್ರನದ್ವಾರಾ ಶರೀರಉಳ್ಳಂಥಾವನು ಈತನು ಉತ್ಪನ್ನನಾದಮ್ಯಾಲಿ ಸರ್ವಥಾ ಪರಮಾತ್ಮನಲ್ಲಿ ಮನಸ್ಸು ಎರಗದೇ ಹೋದರೆ ಇವರು ದಾವ ಸಾಧನಮಾಡಿ ಪರಮಾತ್ಮನ ಪ್ರೀತಿ ಸಂಪಾದಿಸಬೇಕೋ ಇದು ಆತನ ಕಿಂತ ಸರ್ವಜ್ಞರಾದ ಗುರುಗಳು ಬಲ್ಲರಾದಕಾರಣ ನೀನು ಊರ್ಧ್ವ ರೇತಸ್ಸುಉಳ್ಳವನಾಗಿ ಪರಮಾತ್ಮನ ವೊಲಿಸಿ, ಸ್ವಯೋಗ್ಯಪದ ಸಂಪಾ ದಿಸಿಕೋ ಎಂದು ಹೇಳಲಾಗಿ ಹಾಗೆ ಆಚರಿಸಲು ಪರಮಾತ್ಮ ಪ್ರೀತನಾಗಿ ನೀನು ಮಹ ಉದ್ಘಟಿತಪಸ್ಸು ಮಾಡಿದಿ. ಇಂದ್ರಿಯ ನಿಗ್ರಹಮಾಡೋಣ ಅತಿ ದುಸ್ತರ. ಇದರಿಂದ ನಾನು ಬಹಳ ಪ್ರೀತನಾದೆ. ನೀನು ಸ್ವಯೋಗ್ಯ ವೇದದೃಷ್ಟನಾಗಿ ತದುಕ್ತ ಗುಹ್ಯೋಪಸಂಹಾರ ಮಾಡೆಂದು ಹೇಳಿ ಆದ ರಂತೆ ಮಾಡಿಸಿಕೊಂಡು ಅವನಿಗೆ ತಕ್ಕ ಪೂರ್ಣ ಅನುಗ್ರಹದಿಂದ ಪರ ಮಾತ್ಮ ಆಡಿದ ಮಾತು— "ನೀನು ಊರ್ಧ್ವ ರೇತಸಸ್ಕನಾದಕಾರಣ ನೀನು ಸರ್ವರ ಗುಹ್ಯಾಭಿಮಾನಿಯಾಗು, ಸರ್ವರ ಮೂಲಾಧಾರದಲ್ಲಿ ಚತುರ್ದಳ ಕಮಲಾಭಿಮಾನಿಯಾಗು, ಅಲ್ಲಿ ವಾಸಮಾಡಿ ನನ್ನ ಆರಾಧಿಸು ನಿನ್ನ ದುಹಿತೃವಂಶದಲ್ಲಿ ನಾನು ಮಹಾಜ್ಞಾನೋಪದೇಶಕನಾಗಿ ಅವತರಿ ಸೇನು. ಅಲ್ಲಿಂದ ನಿನ್ನಿಂದ ಸ್ತುತ್ಯನಾಗಿ ನಿನಗೆ ಬಂದ ಮಹಾಭಯ ಅಸು ರಾದಿಗಳ ಪರಿಹರಿಸಿ ನಿನಗೆ ಮಹಜ್ಞಾನ ಉಪನಿಷದರ್ಥಗಳಿಂದ ಉಪ ದೇಶಮಾಡಿ, ನಿನ್ನ ಉದ್ಧರಿಸೇನು. ಸಮಗ್ರ ಮನುಗಳನ್ನು ರಾಯರು ಗಳನ್ನು ನಿನ್ನ ವಂಶದಲ್ಲಿ ಉತ್ಪನ್ನರಾಗೋಹಾಗ ಮಾಡೇನು, ಮತ್ತು ಅನೇಕ ಅವತಾರಗಳನ್ನು ಮಾಡೇನು, ಸಕಲ ಜಗತ್ತಿನ ಸಂತತಿ ನಿನ್ನದೇ ಮಾಡೇನು, ಇಷ್ಟು ಜಗತ್ತಿನ ಮಧ್ಯದಲ್ಲಿ ನಿನ್ನನ್ನೇ ಆದಿ ಮನುವಿನ ಮಾಡೇನು. ಶ್ರೇಷ್ಠನ ಮಾಡೇನು" ಎಂದು ವರಕೊಟ್ಟು ನೀನು ಭೂಮಿ ಯಲ್ಲಿ ಸರ್ವರ ಗುಂಹೇಂದ್ರಿಯಾಭಿಮಾನಿಯಾಗಿದ್ದು ಭಗವದ್ಭಕ್ತರಾದ ತಾರತಮ್ಯದಿಂದ ನಿನ್ನ ತತ್ವ ಸ್ವಾಮಿತ್ವವನ್ನು ನನ್ನಿಂದ ದತ್ತವಾದದ್ದು ಎಂದು ದಾರು ಬಲ್ಲವರು ಅವರಿಗೆ ಇಂದ್ರಿಯ ನಿಗ್ರಹ ಅನಾಯಾಸ ಮಾಡಿಸು. ಇದೇ ನನ್ನ ಸೇವೆ. ದಾರು ಅಭಕ್ತರೋ ನಿಮ್ಮ ನಿಮ್ಮ

ಇಂದ್ರಿಯ ಸ್ವಾಮಿತ್ವ ನಮ್ಮ ಅಧೀನವಾದರೂ ತಿಳಿಲಿಲ್ಲವ್ರೋ ? ಇಂದ್ರಿಯ ನಿಗ್ರಹ ಸರ್ವಥಾ ಕೊಡದಲೇ ಕಂಡಲ್ಲಿ ವ್ಯಭಿಚಾರಿಸೋಹಾಂಗ ಮಾಡಿ ನರಕಾದ್ಯನರ್ಥ ಐದೋಹಾಂಗ ಮಾಡಿಸು. ಅದು ನನ್ನ ಪೂಜೆಯೆಂದು ಪರಮಾತ್ಮ ವರ ಕೊಟ್ಟಿದ್ದಾನೆ. ತತ್ಕಾರಣ ಊರ್ಧ್ವ ರೇತಸ್ಕನಾಗೆ, ಗುಹ್ಯೇಂದ್ರಿಯ ಸ್ವಾಧೀನ ಮಾಡೇನೆಂಬ ಇಚ್ಛೆ ಇದ್ದಂಥವನು ಪರಮಾತ್ಮನ ಭಕ್ತನಾಗಿ ಮದ್ಭಕ್ತ ತಾರತಮ್ಯ ತಿಳಿದು, ಗುಹ್ಯೆಂದ್ರಿಯಾಭಿಮಾನಿಯಾದ ಸ್ವಾಯಂಭುವ ಮನುವಿನ ಮೊರೆ ಹೊಕ್ಕರೇ ಪ್ರಾಪ್ತ ಹೊರ್ತಾಗಿ ಅನ್ಯರಿಂದ ಸರ್ವಥಾ ಬಾರದುಯೆಂದು. ಇದು ಸ್ವಾಯಂಭುವ ಮನುವಿನ ಪ್ರಕರಣ.

ರಜೋರಜಃ ಸತ್ವ ಗುಣದ ವಿಕಾರವುಳ್ಳವರ ಹೇಳಲ್ಪಡುತ್ತದೆ. ಪ್ರವಾಹ ಯಮಾದಿಗಳು ವರುಣ ನಾರದ ಋಷಿ ಭೃಗ್ವಾದಿಗಳು ಮರಿಚ್ಯಾದಿಗಳು ಮಿತ್ರನಾಮಕ ಸೂರ್ಯನತನಕ ರಜೋರಜಃ ಸತ್ವಗುಣದಿಂದ ವಿಕಾರವುಳ್ಳ ಶರೀರಯೆಂದು ತಿಳಿಬೇಕು. ಇವರು ಒಬ್ಬರಕಿಂತಾ ಒಬ್ಬರು ಕಿಂಚಿತು ನ್ಯೂನಾಧಿಕರು ಇದ್ದಾರೆ. ಇದೆಲ್ಲಾ ಒಟ್ಟಿಗೆ ಸ್ವಾಯಂಭು ಮನುವಿನಿಂದ ಮಿತ್ರನಾಮಕ ಸೂರ್ಯನ ಪರಿಯಂತರವೂ ದಶಗುಣದಿಂದ ನ್ಯೂನರು. ರಜೋರಜಃ ಸತ್ವಗುಣದ ವಿಕಾರದಿಂದ ತೈಜಸ ರುದ್ರದೇವರಿಂದ ಇಂದ್ರ ಅಹಂಕಾರಿಕ ಪ್ರಾಣನದ್ವಾರ ಉತ್ಪನ್ನರಾದಂಥಾ

## ಪ್ರವಾಹ ವಾಯುದೇವರು

ಸ್ವಗುರುಗಳಿಂದ ಉಪದಿಷ್ಟನಾಗಿ ಪರಮಾತ್ಮನ ಆರಾಧನೆ ಮಾಡಬೇಕಾದರೆ ಸರ್ವ ಶರೀರ ಸ್ವಾಧೀನಕ್ಕ ಬಾರದಪಕ್ಷದಲ್ಲಿ ಮತ್ತೂ ದಯ ಮಾಡಿ ಗುರುಗಳಾದ ಅಹಂಕಾರಿಕ ಪ್ರಾಣದೇವರು ನೀನು ಶ್ವಾಸನಿರೋಧ ಮಾಡಿ, ನಿಸ್ಸಂಗನಾಗಿ ಹೃದ್ಗತ ಪರಮಾತ್ಮನಲ್ಲೇ ಅಧಿಕ ನಿಷ್ಟವುಳ್ಳವನಾಗಿ ಜನರಸಂಗ ವರ್ಜಿತನಾಗಿ ಏಕಾಂತದಲ್ಲಿ ಪರಮಾತ್ಮನ ವೊಲಿಸು, ಪರಮಾತ್ಮ ದಯಮಾಡಿ ಪ್ರತ್ಯಕ್ಷ ನಿನ್ನ ಸ್ವಯೋಗ್ಯ ದರ್ಶನಮಾಡಿಸಿ ತದ್ಗುಣಗಳಿಂದ ಸ್ತುತ್ಯನಾಗಿ ನಿನಗೆ ತಕ್ಕ ಪದ ಕೊಟ್ಟಾನೆಂದು ಹೇಳಲಾಗಿ ಹಾಗ ಪರಮಾತ್ಮನ ವೊಲಿಸಿದರೆ ಪ್ರತ್ಯಕ್ಷನಾಗಿ ವೇದ ದ್ರಷ್ಟನಮಾಡಿ,

ತಮ್ಮ ಗುಣಗಣಗಳಿಂದ ಉಪಸಂಹಾರ ಮಾಡಿಸಿಕೊಂಡು. ಪ್ರೀತನಾಗಿ, ನೀನು ಶ್ವಾಸನಿರೋಧ ಮಾಡಿ ನನ್ನನ್ನ ಮೆಚ್ಚಿಸಿ ನೀನು ದಾವ ನಿಮಿತ್ತ ಶ್ವಾಸನಿರೋಧ ಮಾಡಿದ್ದೀಯೋ ಅದೇ ನಿಮಿತ್ತದಿಂದ ನೀನು ಭೂತವಾಯುಗೆ ಅಭಿಮಾನಿಯಾಗಿ ಆ ವಾಯು ನಿನ್ನ ಶರೀರ ಮಾಡಿಕೊಂಡು ಬ್ರಹ್ಮಾಂಡವರಣದ ವಾಯು ಆವರಣಕ್ಕೆ ಅಭಿಮಾನಿಯಾಗು. ಹಾಗೆ ಬ್ರಹ್ಮಾಂಡೋತ್ಪತ್ತ್ಯಾನಂತರ ಭೂತ ವಾಯುಗೆ ಅಭಿಮಾನಿಯಾಗು. ಸರ್ವ ಶರೀರದಲ್ಲಿ ಶ್ವಾಸರೂಪಿಯಾದ ಮುಖ್ಯ ಪ್ರಾಣದೇವರಿಗೆ ನೀನು ಶ್ವಾಸ ರೂಪದಿಂದ ಅಧಿಷ್ಠಾನನಾಗಿರು. ದಾರು ನಿಮ್ಮ ಅನುಸರಿಸಿವರೆ ನನ್ನಲ್ಲಿ ಭಕ್ತಿವುಳ್ಳವರ ಕಂಡರೆ ಶ್ವಾಸ ನಿರೋಧಮಾಡಿಸಿ ನನ್ನ ಮೆಚ್ಚಿಸುವಂಥಾ ಧ್ಯಾನ ಮಾಡಲಿಕ್ಕೆ ಸಾನುಕೂಲನಾಗಿರು. ನಿನ್ನಕಿಂತ ನೀಚರಿಗೆ ಶ್ವಾಸ ನಿರೋಧ ಸಾಮರ್ಥಿಗೆ ನಿನ್ನ ದ್ವಾರ ಮುಖ್ಯ ಪ್ರಾಣದೇವರು ಕೊಟ್ಟಾರು. ನಾನು ನಡಸಥೀನೆಂದು ವರಾ ಕೊಟ್ಟ ಕಾರಣ ಶ್ವಾಸನಿರೋಧ ಸಾಮರ್ಥಿಗೆ ಪ್ರವಾಹವಾಯುವಿನ ಪ್ರಾರ್ಥನಾ ಮಾಡಿ ಪುರುಷಾರ್ಥ ಸಂಪಾದಿಸಬೇಕು. (೫) ಗುಣಕ್ಕೆ ಅನಿರುದ್ಧನಕಿಂತಲೂ ನೀಚನು. ಇದು ಪ್ರವಾಹವಾಯುವಿನ ಪ್ರಕರಣ.

ಸೂರ್ಯ ಚಂದ್ರ ಯಮ ಶತರೂಪಾದೇವಿ ಈ ನಾಲ್ವರು ಸಮರು. ಈ ರಜೋರಜ ಸತ್ವಗುಣದಿಂದಲ್ಲೇವೆ ವಿಕಾರವಾದ ಶರೀರವುಳ್ಳವರು.

## ವಿವಸ್ವಾನ್ ಸೂರ್ಯದೇವರ ಪ್ರಕರಣ

ರಜೋರಜಃ ಸತ್ವಗುಣದಿಂದಲ್ಲೇವೆ ಶರೀರವುಳ್ಳ ವೈಕಾರಿಕ ರುದ್ರದೇವರಿಂದಲ್ಲೇವೆ ಇಂದ್ರಿಯಾಭಿಮಾನಿ ದಶದೇವತೆಗಳ ಸೃಷ್ಟಿಯೆಂದು ಹೇಳಲ್ಪಡುತ್ತದೆ. ಅದು ಯಾತಕ್ಕೆಂದರೆ ರಜೋರಜಃ ಸತ್ವ ಗುಣ ಮೂರು ಭಾಗದೊಳಗೆ ಸತ್ವಭಾಗವೇ ಆದಕಾರಣ ಆದರೂ ಇವರ ಸೃಷ್ಟಿ ರಜೋರಜಃ ಸತ್ವವೆಂದು ತಿಳಿಯಬೇಕು.. ಹೀಗ್ಯಾಕೆಂದರೆ ತಾರತಮ್ಯದಲ್ಲಿ ವ್ಯತ್ಯಾಸ ಇಲ್ಲದಹಾಗೆ ಒಡಂಬಡಬೇಕು. ಇದು ಎಲ್ಲಿಂದ ಎಂದರೆ'ಪ್ರವಾಹ ವಾಯು ಆರಂಭಮಾಡಿ ಮಿತ್ರನಾಮಕ ಸೂರ್ಯನ ಪರಿಯಂತರವು. ಈ ಸೂರ್ಯನು ತೈಜಸರುದ್ರದೇವರಿಂದ ಇಂದ್ರ ಬೃಹಸ್ಪತ್ಯಾಚಾರ್ಯರ

ದ್ವಾರ ಉತ್ಪನ್ನನಾಗಿ ಗುರೂಪದಿಷ್ಟನಾಗಿ ಪರಮಾತ್ಮನನ್ನೇ ಆರಾಧನೆ ಮಾಡೇನೆನಲು, ಭಕ್ತಿ ಜನಿಸದೇ ಹೋದರೆ ಆ ವ್ಯಾಲಿ ಮತ್ತೂ ಗುರುಗಳ ಕೇಳಲು ನೀನು ಉಪದಿಷ್ಟಾನುಸಾರ ಪರಮಾತ್ಮನ ಸುಂದರ ವಿಗ್ರಹ ಮನಸ್ಸಿನಲ್ಲಿ ಮಾಡಿಕೊಂಡು ನಿರಂತರವಾಗಿ ಧ್ಯಾನಮಾಡಿದರೆ ಪರಮಾತ್ಮ ಪ್ರಸನ್ನನಾಗಿ ನಿನ್ನ ಯೋಗ್ಯತೀ ಸಮಗ್ರಕ್ಕ ಫಲಪ್ರದನಾದಾನೆನ್ನಲು ಹಾಗೆ ಜಿತ ಚಿತ್ತನಾಗಿ ಏಕನಿಷ್ಠಿಯಿಂದ ಧ್ಯಾನಮಾಡಿ, ಪರಮಾತ್ಮನ ಮೂರ್ತಿ ನೋಡುತಿರಲಾಗಿ ಪರಮಾತ್ಮ ದಯಮಾಡಿ ಪ್ರಸನ್ನನಾಗೋದರ ಗೋಸ್ಕರ ಅನ್ಯಪದಾರ್ಥಗಳ ಕಣ್ಣಿಂದ ನೋಡದಲೇ ಇರಲಾಗಿ, ಪರಮಾತ್ಮ ಪ್ರಸನ್ನತೆಯಿಂದ ಪ್ರತ್ಯಕ್ಷನಾಗಿ ನಿನ್ನ ದೃಷ್ಟಿಗೆ ಮೆಚ್ಚಿದೆನೆಂದು ಹೇಳಿ ಸಮಗ್ರ ಸ್ವಯೋಗ್ಯವೇಪದ್ರೃಷ್ಟನಾಗಿ, ತದ್ಗುಣಗಳಿಂದ ಸ್ತೋತ್ರ ಮಾಡಿಸಿ, ದಾವ ನಿಮಿತ್ಯದಿಂದ ಕಣ್ಣು ಸಮರ್ಪಣೆಮಾಡಿ ಅನ್ಯ ಪದಾರ್ಥ ನೋಡಲಿಲ್ಲ. ಇನ್ನುಮುಂದೆ ಬ್ರಹ್ಮಾಂಡಂತರ ನೀನು ಸರ್ವರ ನಯನಾಭಿಮಾನಿಯಾಗು. ವತ್ಸರಕ್ಕೆ ಒಂದು ಮಾಸದಲ್ಲಿ ಜಗತ್ತಿಗೆ ಪ್ರಕಾಶಮಾಡುವಂಥಾ ಪದವಿಯಲ್ಲಿರು. ನನ್ನನ್ನೇ ನೀನು ನೋಡಿ ಪವಿತ್ರನಾದಕಾರಣ ನಿನ್ನ ದರ್ಶನ ಲೋಕರಿಗೆ ಪುಣ್ಯಪ್ರದವಾಗಲಿ. ಸಕಲ ಜಗತ್ತಿಗೆ ಸಕಲ ಕರ್ಮಕ್ಕೂ ಸಾಕ್ಷಿಯಾಗಿರು. ನಿನ್ನೊಳಗೆ ನಾ ನಿಂತು ನಿನ್ನಕಿಂತ ಸೋತ್ತುಮರಿಂದ ಉಪಾಸ್ಯನಾಗುಥೀನಿ. ನನ್ನನ್ನೇ ನಿನ್ನ ಹೃದಯದಲ್ಲಿ ಸದಾ ನೋಡಿದ ಕಾರಣ ನಾನು ನಿನಗೆ ಪುತ್ರನಾದೆ. ಆದ್ದರಿಂದ ನಿನ್ನ ವಂಶದಲ್ಲಿ ಅವತಾರ ಮಾಡೇನು. ನಿನ್ನ ಸಂತತಿ ಪ್ರಸಿದ್ಧಮಾಡೇನೆಂದು ವರ ಕೊಟ್ಟ. ನೀನು ಜಗತ್ತಿನಲ್ಲಿ ದಾರು ನನ್ನ ಭಕ್ತರಾಗಿರುಥಾರೋ ನಿನ್ನಗೆ ವರ ಕೊಟ್ಟಪ್ರಕಾರ ಸ್ವಾಮಿತ್ವ ನಡಸೋದು. ಈ ಪ್ರಕಾರ ತಿಳಿವವರಿಗೆ ಅವರ ನಯನ ವಿಷಯಗಳಲ್ಲಿ ಎರಗಸದೇ ಸದಾ ನನ್ನನ್ನೇ ನೋಡಿ ಕಡೆ ಬೀಳೋಹಾಗೆ ಮಾಡು. ಇದೇ ನನ್ನ ಪೂಜೆ. ಯಾರು ಅಭಕ್ತರೋ ಈ ವಿಷಯ ನಿನ್ನನ್ನು ತಿಳಿಯರೋ ಅವರನ್ನು ವಿಷಯದಲ್ಲಿ ಎರಗಿಸಿ ನನ್ನ ಮಾರ್ಗ ತೋರಿಸಬ್ಯಾಡ. ಅದೂ ನನ್ನ ಪೂಜೆಯೆಂದು ಪರಮಾತ್ಮ ಹೇಳಿದ. ಇಂಥ ಸೂರ್ಯನು ಪ್ರವಾಹವಾಯುವಿನಕಿಂತಲೂ ದ್ವಿಗುಣಾಧಮನು. ಇದು ವಿವಾಸ್ವಾನ್ನಾಮ ಸೂರ್ಯನ ಪ್ರಕರಣ.

## ಚಂದ್ರನಪ್ರಕರಣ

ರಜೋರಜಃ ಸತ್ವಗುಣದ ವಿಕಾರದಿಂದ ಶರೀರ ತ್ರೈಜಸ ರುದ್ರದೇವರ ದ್ವಾರ ಕಾಮಪುತ್ರ ಅನಿರುದ್ಧನದ್ವಾರ ಭಾರತೀ ಪತಿಗತನಾದ ಪರಮಾತ್ಮ ನಿಂದ ಸೃಷ್ಟನಾದಂಥಾ ಚಂದ್ರನು ಗುರೋಪದಿಷ್ಟನಾದ ಪ್ರಕಾರ ಆರಾಧಿ ಸೇನಂದರೆ ಮನಸ್ಸು ಸರ್ವ ಸ್ಥಳದಲ್ಲಿ ನಿ ಧಾ ರ ಕ ಬಾರದ ಪಕ್ಷದಲ್ಲಿ ಮತ್ತೂ ಸ್ವಗುರುಗಳಾದವರ ಪ್ರಾರ್ಥನಾ ಮಾಡಲು ತಮ್ಮೋಪಾದೆಲಿ ಉಪದೇಶ ಮಾಡಿದ ಪ್ರಕಾರ ಪರಮಾತ್ಮನ ಸೇವೆ ಸುಲಭವಲ್ಲ. ಆರ್ಯ ರಾದ ಬ್ರ ಹ್ಮಾ ದಿ ಗ ಳು ಅತಿ ,ದುರ್ಲಭವೆನ್ನುತ್ತಾರೆ. ಇನ್ನು ಒಂದು ಇಂದ್ರಿಯವಾದರೂ ವ್ಯಭಿಚಾರವಿಲ್ಲದೇ ಪರಮಾತ್ಮಗೆ ಸಮರ್ಪಿಸುತ್ತಿದ್ದರೆ ಹಾಗೆ ಪರಮಾತ್ಮನ ಪ್ರೊಲಿಸಿ ನೀನು ನಿನ್ನ ಕರ್ಮಗಳ ಸಮರ್ಪಣೆ ಮಾಡು. ಪರಮಾತ್ಮನ ಗುಣಕಥನ ವಿನಹ ಇನ್ನೊಂದು ಕೇಳದಿದ್ದರೆ ವಿಶ್ವಾಸಕ್ಕ ಮೆಚ್ಚಿ ಪರಮಾತ್ಮ ದಯ ಮಾಡ್ಯಾನು ಎನಲು ಹಾಗೆ ಆಚರಿಸಲು ಪರಮಾತ್ಮ ದಯಮಾಡಿ ಪ್ರತ್ಯಕ್ಷನಾಗಿ ಸ್ವಯೋಗ್ಯವೇದ ದೃಷ್ಟನಾಗಿ ಪರಮಾತ್ಮನ ಗುಣೋಪಸಂಹಾರಮಾಡಿ ಕಥಾಮೃತಕೇಳಿ ಜ್ಞಾನ ಬೆಳ ಸಿದಕಾರಣ ಅಮೃತ ಕಿರಣವುಳ್ಳವನಾಗಿ ಸಸಿ ಅಭಿವೃದ್ಧಿ ಮಾಡು. ಕರ್ಣ ಸಮರ್ಪಣ ಮಾಡಿದ ಪ್ರಯುಕ್ತ ಶ್ರೋತ್ರಾಭಿಮಾನಿಯಾಗಿ ಸರ್ವರ ಕರ್ನದಲ್ಲಿ ಆವಾಸ ಮಾಡಿ ನನ್ನ ಭಕ್ತರ ಶ್ರವಣ ನನ್ನ ಮಹತ್ಮೆ ಕೇಳೋ ವಿಷಯದಲ್ಲಿ ಎರಗಿಸಿ ಅವರನ್ನು ಉದ್ಧರಿಸು. ನನ್ನಲ್ಲಿ ಅಪ್ರೀತಿ ಬಡು ವವರಲ್ಲಿದ್ದು ದುರ್ವಾರ್ತೆಯಲ್ಲಿ ಎರಗಿಸಿ ತಮಸ್ಸಿನ ಸಾಧನ ಮಾಡಿಸು. ಇದೇ ನನ್ನ ಪೂಜೆ. ನೀನು ಅನ್ಯವಾರ್ತೆ ಕೇಳಲಿಲ್ಲದ ಕಾರಣ ಜಗತ್ತಿಗೆ ಪ್ರಕಾಶಕನಾಗಿ ಇನ್ನೊಬ್ಬರ ಅಧಿಕಾರ ನಿನ್ನ ಮ್ಯಾಲೆ ಕಾಣಬ್ಯಾಡ. ಹೀಗೆ ನಿನ್ನ ಮಹತ್ಮೆ ಭಾರತೀದೇವಿ ಅಭಿಮಾನಿಯಾಗಿ ನಡಿಸ್ಯಾಳು. ಸೂರ್ಯನಲ್ಲಿ ವಾಯುದೇವರು ಅಭಿಮಾನಿಯಾಗಿ ಇದ್ದಾನೆಂದು ಚಂದ್ರಗೆ ಪರಮಾತ್ಮ ಪ್ರತ್ಯಕ್ಷನಾಗಿ ನುಡಿದ ಕಾರಣ ಪರಮಾತ್ಮನ ಕಥಾಮೃತದಲ್ಲಿ ಶ್ರವಣ ಎರಗಬೇಕಾದರೆ ಶ್ರೋತ್ರಾಭಿಮಾನಿ ಚಂದ್ರನ ಭಕ್ತ್ಯೇನ ಪರ ಮಾತ್ಮನ ಭಕ್ತೇನ ಸಜ್ಜನರ ಮೊರೆಹೊಕ್ಕು ಶ್ರೋತ್ರವಶ ಮಾಡಿಕೊಳ ತಕ್ಕದ್ದು. ಇದು ಚಂದ್ರನ ಪ್ರಕರಣ.

# ಯಮದೇವರ ಪ್ರಕರಣ

ಯಮಧರ್ಮರಾಯನು ರಜೋರಜಃ ಸತ್ವ ಗುಣದ ವಿಕಾರದಿಂದ ಸ್ವಾಯಂಭು ಮನುವಿನ ದ್ವಾರ ತ್ರಿಜಸ ರುದ್ರದೇವರು ಇಂದ್ರನ ದ್ವಾರ ವಾಯು ಪರಮಾತ್ಮನಿಂದ ಸೃಷ್ಟವಾದ ಶರೀರವುಳ್ಳವನಾಗಿ, ಚಂದ್ರ ಸೂರ್ಯರಿಗೆ ಸಮಾನನಾಗಿ ಗುರೋಪದಿಷ್ಟನಾಗಿ ಪರಮಾತ್ಮನ ಆರಾಧಿಸಬೇಕಾದರೆ ಚಿತ್ತ ಪ್ರಶಸ್ಥ ಕಾಣದ ಪ್ರಯುಕ್ತ ಮತ್ತೆ ಗುರುಗಳನ್ನು ಅನುಸರಿಸಿ, ಗುರುವಾದ ಸ್ವಾಯಂಭುಮನು ನೀನು ಧರ್ಮಾಧರ್ಮದಲ್ಲಿ ವಿವೇಕವಾಗಿ ತಿಳಿಯೋಣವೇ ಪರಮಾತ್ಮನ ಪ್ರೀತಿ ಎಂದು ಮನಸ್ಸು ಇದರಲ್ಲಿ ವಿಚಾರಿಸೋ ವಿಷಯದಲ್ಲಿ ರತನಾದರೇ ಪರಮಾತ್ಮ ಪ್ರೀತನಾಗಿ ಪ್ರತ್ಯಕ್ಷನಾಗಿ ನಿನ್ನ ಸ್ವಯೋಗ್ಯನೆನಿಸಿ ಆ ವೇದೋಕ್ತ ಗುಣಗಳಿಂದ ಪರಮಾತ್ಮಸ್ತುತ್ಯನಾಗಿ ನಿನ್ನ ಯೋಗ್ಯ ಪದದ ಫಲಾ ಕೊಟ್ಟಾನೆಂದು ಹೇಳಲಾಗಿ ಹಾಗೆ ಧರ್ಮರಾಯ ಆಚರಿಸಲು, ಪರಮಾತ್ಮ ಪ್ರತ್ಯಕ್ಷನಾಗಿ ನಿನ್ನ ವಿವೇಕ ಧರ್ಮಕ್ಕೆ ಮೆಚ್ಚಿದೆನೆಂದು ಹೇಳಿ, ವೇದದೃಷ್ಟ ಸ್ವಯೋಗ್ಯಾನುಸಾರ ಕೊಟ್ಟು ಆ ವೇದೋಕ್ತ ಗುಣಗಳಿಂದ ಸ್ತುತ್ಯನಾಗಿ ನೀನು ಧರ್ಮದಲ್ಲಿ ವಿವೇಕಿಯಾದಕಾರಣ ಲೋಕರ ಧರ್ಮಕ್ಕೆ ಶಿಕ್ಷಕನಾಗು. ಸೂಕ್ಷ್ಮ ಧರ್ಮಗಳು ಬಲ್ಲಿಯಾದಕಾರಣ ನನ್ನಿಂದ ಮಾಡಲ್ಪಡುವಂಥಾ ಅವತಾರ ಸಂಹಾರಕ್ಕೆ ಕಾರಣನಾಗು. ಇದರಿಂದ ನಿನಗೆ ಪಾಪವಿಲ್ಲ. ಹ್ಯಾಗಂದರೆ ಧರ್ಮಜ್ಞಾನೀ ನನ್ನ ಸಂಕಲ್ಪ ಬಲ್ಲಿಯಾದ ಕಾರಣ ಅಧಿಕಾರ ನಿನಗೆ ನಾನೇ ಕೊಟ್ಟಕಾರಣ ಅವರ ಕರ್ಮಾನುಸಾರ ಫಲವೇ ನೀನು ಕೊಟ್ಟ ಕಾರಣ ಇದರವಿನಹಾ ಧರ್ಮ ಮಾಡಿದವಗೆ ಸುಖ ಬಡಿಸೋಣ, ದುಷ್ಕರ್ಮ ಮಾಡಿದವಗೆ ದುಃಖಬಡಿಸೋಣ, ನನ್ನ ಆಜ್ಞೆ ಇದೇ ನನ್ನ ಪೂಜೆ. ನೀನು ದಕ್ಷಿಣ ದಿಕ್ಕಿಗೆ ಸ್ವಾಮಿಯಾಗಿ ನನ್ನ ಆಜ್ಞೆ ನಡಿಸೆಂದು ಹೇಳಿ ಧರ್ಮಗೆ ಪರಮಾತ್ಮ ವರ ಕೊಟ್ಟಿದ್ದು. ಇದು ಯಮರಾಯನ ಪ್ರಕರಣ.

## ಶತರೂಪಾದೇವಿ ಪ್ರಕರಣ

ಸ್ವಾಯಂಭುವ ಮನುವಿನ ಪತ್ನಿ ಶತರೂಪಾದೇವಿ. ರಜೋರಜಃ ಸತ್ವಗುಣದಿಂದ ಪತಿದ್ವಾರಾ ಶರೀರ ವುಳ್ಳವಳಾಗಿ ತನ್ನ ಪತಿ ಪುಣ್ಯ ಪ್ರಭಾವದಿಂದಲೂ ಜನ್ಮಾಂತರದಲ್ಲಿ ಪತಿವ್ರತಾ ಸ್ತ್ರೀಯಳಾದ ಕಾರಣ ತನ್ನ ಪತಿ ಹೊಂದಿ ಪತ್ಯಾಜ್ಞಾನುಸಾರ ನಡೆದು ಮೋಕ್ಷ ಹೊಂದಥಾಳೆ. ಈಕಿ ಯಮದೇವರಿಗೆ ಸಮಾನಳು.

## ವರುಣದೇವರ ಪ್ರಕರಣ

ಇನ್ನು ರಜೋರಜಃ ಸತ್ವಗುಣದಿಂದ ವಿಕಾರ ಶರೀರವುಳ್ಳಂಥಾ ವರುಣದೇವರು ಯಮದೇವರಕಿಂತ ಪಾದಪಾದಾರ್ಧಕ್ಕ ನ್ಯೂನರಾಗಿ ತೈಜಸ ರುದ್ರದೇವರಿಂದ ಕಾಮಾನಿರುದ್ಧ ಚಂದ್ರಮನದ್ವಾರಾ ಉತ್ಪನ್ನ ರಾಗಿ ಗುರೂಪದಿಷ್ಟಾನುಸಾರ ಪರಮಾತ್ಮನಲ್ಲಿ ಮನಸ್ಸು ಎರಗದ ಪಕ್ಷದಲ್ಲಿ ಮತ್ತೂ ಗುರುಗಳ ಅಜ್ಞೆಯಿಂದ ಜಿಂಹ್ವೇಂದ್ರಿಯ ನಿಗ್ರಹಮಾಡಿ, ಪರ ಮಾತ್ಮನ ಪೂಲಿಸಿ, ಅಪರೋಕ್ಷ ಸಂಪಾದಿಸಿ. ವೇದದೃಷ್ಟನಾಗಿ ಸ್ವಯೋ ಗ್ಯಾನುಸಾರ ಗುಣಗಳು ಪರಮಾತ್ಮನಲ್ಲಿ ಉಪಸಂಹಾರ ಮಾಡಿದಬಳಿಕ ಅತಿ ಕರುಣದಿಂದ ಪರಮಾತ್ಮನು ನುಡಿದಪ್ರಕಾರ ನೀನು ಜಿಂಹ್ವೇಂದ್ರಿಯ ನಿಗ್ರಹ ಮಾಡಿದಕಾರಣ ಸಕಲ ಪ್ರಾಣಿಗಳ ಜಿಂಹ್ವೇಂದ್ರಿಯಾಭಿಮಾನಿ ಯಾಗು. ಬಗೆ ಬಗೆ ರಸ ತ್ಯಜಿಸಿದಕಾರಣ ಬಗೆ ಬಗೆ ರಸಕರವಾದಂಥಾ ಸಮುದ್ರವೇ ಶರೀರವುಳ್ಳವನಾಗಿ ಜಿಂಹ್ವಾಭಿಮಾನಿಯಾಗು. ಬಗೆ ಬಗೆ ಅನ್ನಗಳು ಧರಿಸುವಂಥಾ ಶರೀರದಲ್ಲಿ ನೀನು ನನ್ನನ್ನೇ ಧರಿಸಿ ಮಿಗಿಲಾದವು ವರ್ಜಿಸಿದಕಾರಣ ನಾನು ನಿನ್ನ ಹೊಟ್ಟಿವೊಳಗೆ ನನ್ನ ನಿತ್ಯವಾದ ನಿಜ ಧಾಮವುಳ್ಳವನಾಥೇನು. ನೀನು ಅತಿ ದುಸ್ತರವಾದ ರಸನೇಂದ್ರಿಯ ನಿಗ್ರಹಮಾಡಿದ ಕಾರಣ ನಿನ್ನಕಿಂತ ಉತ್ತಮರಾದ ದುರ್ಲಭರಾದ ಬ್ರಹ್ಮಾದಿಗಳನ್ನು ನಿನ್ನ ಮನಿಗೆ ಬಾಹೋಹಾಂಗ ಮಾಡೇನು. ರಸ ವರ್ಜಿಸಿದವಗೆ ಸರ್ವ ಭೋಗ ಸಾಧ್ಯವಾದ ಕಾರಣ ನೀನು ಸರ್ವ ವಿಷಯದಲ್ಲಿ ವೈರಾಗ್ಯಉಳ್ಳವನಾದೀ ಎಂದು, ನಾನು ಸಮುದ್ರಮಂಥನ

ದ್ವಾರಾ ಸರ್ವ ಸಾಮ್ರಾಜ್ಯ ನಿನ್ನಿಂದೇ ಮಾಡೇನು. ರವಾ ಚಂದ್ರ ಇಂದ್ರಚಾಪ, ಅಮೃತ, ತರುಪಾರಿಜಾತ, ವುಚ್ಚೈಶ್ರವ, ಐರಾವತ ಮೊದಲಾಗಿ ನಿನ್ನಿಂದ ಹುಟ್ಟಿಸಿ ನಿನ್ನ ರತ್ನಾಕರನ ಮಾಡೇನೆಂದು ನಿನಗೆ ಆಪಾಭಿಮಾನಿ ಜಿಂಹ್ವಾಭಿಮಾನಿತ್ವ ಎರಡೂ ನಿನಗೆ ಕೊಟ್ಟಿದ್ದೇನೆ. ನಿನ್ನಲ್ಲಿ ನನ್ನ ಅನುಗ್ರಹ ಬಹಳ ಇತ್ತು, ತತ್ಕಾರಣಾ ಹೀಗೆ ಮಾಡಿದೆ. ನೀನು ಮುಂದೆ ಭಕ್ತರಾಗಿದ್ದವರಿಗೆ ನಿನ್ನೋಪಾದಿಯಲ್ಲಿ ಜಿಂಹ್ವೇಂದ್ರಿಯ ನಿಗ್ರಹ ಸಾಮರ್ಥಿ ಕೊಟ್ಟು ಅವರಿಗೆ ಅಭಿವೃದ್ಧಿ ಮಾಡು ಇದೇ ನನ್ನ ಪೂಜೆ

ಅಸಾತ್ವಿಕರಾಗಿ ಕಾಮುಕರಾಗಿ ಯಥಾರ್ಥ ಜ್ಞಾನಶೂನ್ಯರಾಗಿದ್ದ ವರಿಗೆ ದೂರತ್ವ ರಸದಲ್ಲಿ ಅಪೇಕ್ಷವುಳ್ಳವರ ಮಾಡಿ, ನನ್ನ ಭಕ್ತಿರಸಾ ಅವರ ನಾಲಿಗ್ಗೆ ತೋರದಲೇ ಕೆಡಸೋಣವೇ ನನ್ನ ಪೂಜೆ ಎಂದು ಪರ ಮಾತ್ಮ ಹೇಳಿದಕಾರಣ ಜಿಂಹ್ವೇಂದ್ರಿಯ ನಿಗ್ರಹ ಮಾಡೇನೆಂಬೋ ಇಚ್ಛಾವುಳ್ಳ ಪುರುಷರು ಪರಮಾತ್ಮನ ಭಕ್ತರಾಗಿ ವರುಣದೇವರಿಗೆ ಪರ ಮಾತ್ಮ ವರ ಕೊಟ್ಟಪ್ರಕಾರ ತಿಳಿದು ವರುಣನ ಪ್ರಾರ್ಥನಾ ಮಾಡಿದರೆ ಈ ಪ್ರಯೋಜನ ಸಿದ್ಧಿಸುತ್ತದೆ. ಇಲ್ಲವೇ ಇಲ್ಲ. ಇದು ವರುಣ ದೇವರ ಪ್ರಕರಣ.

## ನಾರದ ಋಷಿಗಳ ಪ್ರಕರಣ

ಇನ್ನು ರಜೋರಜಃ ಸತ್ವಗುಣದ ವಿಕಾರದಿಂದ ತೈಜಸ ರುದ್ರದೇವ ರಿಂದ ಇಂದ್ರದಕ್ಷನದ್ವಾರ ಶರೀರವುಳ್ಳಂಥಾ ನಾರದ ಋಷಿಗಳು ಉತ್ಪನ್ನ ರಾದ ತರುವಾಯ ಪರಮಾತ್ಮನಲ್ಲಿ ನಿರ್ಧಾರಾರ್ಥವಾಗಿ ಮನಸ್ಸು ಎರಗದ ಪಕ್ಷದಲ್ಲಿ ಮತ್ತು ಗುರುಗಳನ್ನು ಕೇಳಲಾಗಿ ನಿಸ್ಸಂಗನಾಗಿ ಸರ್ವ ಪ್ರಾಣಿಗಳಲ್ಲಿ ಪರಮಾತ್ಮನೇ ಸ್ವತಂತ್ರನಾಗಿ ಪ್ರೇರಿಸುಥಾನೆ. ಅವರ ವಿನಹಾ ದೇವದೈತ್ಯರು ಚಲಿಸಲಾರರು ಎಂದು ಶೀತೋಷ್ಣ ಪ್ರೇಮ ಪರ ಮಾತ್ಮನ ಪ್ರೇರಣೆಯಿಂದಲ್ಲೇ ಲೋಕ ಕಾಣುತದೆ ಎಂದು ತಿಳಿದು, ಅವನಲ್ಲೇ ಭಕ್ತಿಯಿಂದ ಪರವಶನಾಗಿ ಗಾನ ಮಾಡಿದರೆ ಪರಮಾತ್ಮ ನಿನಗೆ ಪ್ರತ್ಯಕ್ಷನಾಗಿ ನಿನಗೆ ತಕ್ಕ ಪುರುಷಾರ್ಥ ಸಲಿಸ್ಯಾನು ಎನಲು, ಹಾಗೆ ಆಚರಿಸಲು ಪರಮಾತ್ಮ ಪ್ರತ್ಯಕ್ಷನಾಗಿ ನಿನಗೆ ದಾವ ಪುರುಷಾರ್ಥ

ಬೇಕೆಂದು ಕೇಳಲು ಈಗ ಇದ್ದ ಸಾಮ್ರಾಜ್ಯವೇ ನನಗೆ ಮಹಾ ಲಾಭ ವಾಗಿದೆ. ಪದವಿಕಿಂತ ಅಧಿಕ ಮೋಕ್ಷದಲ್ಲಿ ಆನಂದ ಅದೆ. ನೀನು ನನ್ನ ಮ್ಯಾಲೆ ದಯಮಾಡಿ ಇನ್ನು ವರಾ ಕೊಡಬೇಕೆಂಬ ಪಕ್ಷ ಯಿದ್ದಲ್ಲಿ ಇನ್ನು ಮಹಾ ಭಕ್ತಿಯಿಂದ ನಿನ್ನ ಗಾನ ಮಾಡಲಿಕ್ಕ ಸಾನುಕೂಲನಾಗು. ಇನ್ನೊಂದು ಸರ್ವಥಾ ಒಲ್ಲೆನೆಂದು ಕೇಳಲು ಹಾಗೆ ಪರಮಾತ್ಮ ದಯ ಮಾಡಿ ನುಡಿದ ಮಾತು. ಹೇ ಮಹಾಭಾಗಾ ನೀನೇ ಧನ್ಯ. ಸ್ವಯೋಗ್ಯ ವೇದ ದೃಷ್ಟನಾಗಿ ನನ್ನ ಕೊಂಡಾಡಿ ಇದ್ಧೇನೆಂದು ವರಾ ಕೇಳಿಕೊಂಡಿ. ಈ ವರ ಮೋಕ್ಷಕ್ಕೆಕೂಡಾ ಫಲ. ಇಂಥ ಅಸದೃಶ ವರಾ ಕೇಳಿಕೊಂಡ ಕಾರಣ ನಿನಕಿಂತ ಸೋತ್ತಮರಿಗೂ ಜ್ಞಾನ ಭಕ್ತಿ ವೈರಾಗ್ಯ ಕಲಿಸಲಿಕ್ಕ ಶಿಕ್ಷಕನಾಗು. ನಿನ್ನ ಗಾನಕ್ಕ ಮರುಳಾಗಿ ಸರ್ವದಾ ನಿನ್ನ ಬಳಿಯಲ್ಲಿ ಇದ್ಧೇನೆ. ಇನ್ನು ಸರ್ವತ್ರ ನನ್ನ ನೋಡಿದ ಕಾರಣ, ಸರ್ವಲೋಕ ಅನಾಯಾಸ ನೀನು ಸಂಚರಿಸು. ಪ್ರೇಮಾಪ್ರೇಮ ಸಮವಾಗಿ ತಿಳಿದ ಕಾರಣ ದೈತ್ಯರು ಆಪ್ತತ್ವ ಗ್ರಹಿಸಲಿ. ಅಯೋಗ್ಯರಿಗೆ ಕ್ಷುದ್ರ ನುಡಿಗ ಳಿಂದ ಹೇಳಿ ಕೆಡಲಿ. ಈ ಎರಡು ನನಗೆ ಅತ್ಯಂತ ಪ್ರೀತಿಯಾಗಲಿ. ಇದು ತಿಳಿದು ಕೊಂಡಾಡಿದವರಿಗೆ ಭಕ್ತಿ ಹುಟ್ಟಿಸು ಎಂದು ಪರಮಾತ್ಮ ವರಾ ಕೊಟ್ಟಕಾರಣ ಪರಮಾತ್ಮನ ಭಕ್ತನಾಗಿ ನಾರದ ಋಷಿಗಳ ಮೊರೆ ಹೊಕ್ಕರೆ ಲಜ್ಜಾ ರಹಿತನಾಗಿ ಪರಮಾತ್ಮನ ಭಕ್ತಿಯಿಂದ ಗಾನಮಾಡುವ ಭಾಗ್ಯ ದೇವರು ಕೊಡಥಾರೆ. ಇಲ್ಲವೇ ಇಲ್ಲ. ಪರಮಾತ್ಮನ ಭಕ್ತಿಯೇವೆ ಬೇಡಿಕೊಂಡ ಕಾರಣ ದೇವರು ಇವರಿಗೆ ದೇವತ್ವ ಋಷಿತ್ವ ಗಂಧರ್ವತ್ವ ಮೂರು ಕೊಟ್ಟಾರೆ. ಇದರ ಹೊರ್ತು ಸರ್ವರ ಹೃದ್ಗತ ಪರಮಾತ್ಮ ನೆಮರಿಗೆ ಗಾನ ಮಾಡುಥಾರೆ. ಇವರು ವರುಣನಕಿಂತಲ್ಲ್ಯಾ ಕಿಂಚಿತ್ ನ್ಯೂನರು. ಇದು ದೇವಋಷಿ ನಾರದರ ಪ್ರಕರಣ.

## ಭೃಗುಋಷಿಗಳ ಪ್ರಕರಣ

ನಾರದರ ತರುವಾಯ ಕ್ರಮ. ಇನ್ನು ನಾರದ ತೈಜಸ ರುದ್ರನದ್ವಾರ ಇಂದ್ರದಕ್ಷ ಪ್ರಜೇಶ್ವರನದ್ವಾರ ಸೋಮ ವರುಣನದ್ವಾರ ಶರೀರಉಳ್ಳಂಥ ಭೃಗು ಮುನೇಶ್ವರರು. ಅಗ್ನಿ ದಕ್ಷ ಪ್ರಜೇಶ್ವರನ ಪತ್ನಿ ಪ್ರಸೂತಿಗೆ ಸಮರು

ಇವರು ಪರಮಾತ್ಮನ ಆರಾಧನಿಗೆ ಒಮ್ಮಿಂದೊಮ್ಮೆ ಮನಸಿಟ್ಟ ಕಾಲ ದಲ್ಲಿ ಹತ್ತದೇ ದಕ್ಷ ಪ್ರಜೇಶ್ವರನ ಕರುಣಾ ಕೇಳಲು. ನಿಮಗೆ ತಿಳಿದ ವೇದೋಕ್ತ ಗುಣಗಳನ್ನು ಪರಮಾತ್ಮನಲ್ಲಿ ಉಪಸಂಹಾರ ಮಾಡುತ್ತ, ಜ್ಞಾನನಿಷ್ಟರಾಗಿದ್ದರೆ ದೇವರು ಪ್ರೀತಿಪಾನೆನಲು ಹೀಗೆ ಆಚರಿಸಲು, ಉಪದೇಶ ಮಾಡಿದ ಪ್ರಕಾರ ಆಚರಿಸಿದ ಪ್ರಕಾರ ಅನ್ನಮಯಾದಿ ಅಷ್ಟ ರೂಪಗಳು ಕ್ರಮಾತು ಉಪದೇಶಮಾಡಿಕೊಂಡು ಪರಮಾತ್ಮನ ಪ್ರತ್ಯಕ್ಷ ಕರಿನಲು, ಪರಮಾತ್ಮ ಪ್ರತ್ಯಕ್ಷನಾಗಿ ನೀನು ಧನ್ಯನೆಂದು ಆತನ ವೇದ ದೃಷ್ಟನ್ನಮಾಡಿ ಅಧಿಕ ವೇದೋಕ್ತ ಸ್ತುತ್ಯನಾಗಿ ನೀನು ದಾವ ವರ ಬೇಡತಿದ್ದಿ ಬೇಡೆನಲು ನಿನ್ನಾ ಜ್ಞಾದ ವಿನಹವಾಗಿ ಇನ್ನೊಂದು ಸರ್ವಥಾ ಒಲ್ಲೇನೆನಲು ಹಾಗೆ ಪರಮಾತ್ಮ ಒಡಂಬಟ್ಟು ಮಹಾಋಷಿ ಮಾಡಿದ, ಲೋಕಕ್ಕ ಜ್ಞಾನೋಪದೇಷ್ಟನಾಗು. ಲೋಕರಿಗೆ ಸಂದೇಹ ನಿವೃತ್ತ್ಯರ್ಥ ವಾಗಿ ಬ್ರಹ್ಮರುದ್ರರ ಅಪಮಾನ ನೀನು ಮಾಡಿದರೂ ಪಾಪ ಬರಬ್ಯಾಡಾ ಅಥವಾ ಪಾಪಕ್ಕ ಜರಾವ್ಯಾಧನಾಗಿ ನನ್ನಲ್ಲಿ ಬಾಣಾ ಹಾಕಿದರೆ ನಿನಗೆ ಸದ್ಗತಿ ಕೊಡಥೀನಿ. ಇಂಥಾ ಜ್ಞಾನ ನಿನಗೆ ಕೊಟ್ಟಿದ್ದೇನೆಂದು ದಾರು ನಿನ್ನ ಅನುಸರಿಸಿದರೆ ಅವರು ಪ್ರಾಜ್ಞರಾಥಾರು ಎಂದು ಪರಮಾತ್ಮ ವರ ಕೊಟ್ಟ ಪ್ರಯುಕ್ತ ಇವರು ತಪ ಮಾಡಿ ವಿಜಯ ಪಡದ ಪ್ರಯುಕ್ತ, ಜ್ಞಾನಾರ್ಥವಾಗಿ ಇವರ ಪಾದಸ್ಮೃತಿ ಮಾಡಿದರೆ ನಿರ್ಮಲ ಜ್ಞಾನ ಪ್ರಾಪ್ತವಾಗೋದು. ಇದು ಭೃಗುಮುನೇಶ್ವರನ ಪ್ರಕರಣ. ಇವರ ಜ್ಞಾನ ಎಂಥಾದು ಎಂದರೆ ಪರಮಾತ್ಮನ ವಷ್ಟು, ಅವನ ನಂಗಾತ ಪ್ರಜೆ ಗೊಂಬಜ್ಞಾನ ಎಂಥಾದೋ, ಕುಚ್ಛಿತ ಯೋನಿಯಲ್ಲಿ ವ್ಯಾಧನಾಗಿ ಬಾಣ ದಿಂದ ಗ್ರಾಸಾರ್ಥವಾಗಿ ಪರಮಾತ್ಮಗೆ ಪ್ರಯೋಗಮಾಡಿ ಸದ್ಗತಿ ಐದಿದ ಜ್ಞಾನ ಎಂಥಾದೋ? ಸತ್ರಯಾಗದಲ್ಲಿ ಋಷಿಗಳಿಗೆ ನಾರದರು ಪರ ಮಾತ್ಮನ ನಿರ್ಧಾರಾರ್ಥವಾಗಿ ಭೃಗುಮುನೇಶ್ವರರಿಗೆ ಮೊರೆ ಹೊಕ್ಕರೆ ತಿಳಿಸ್ಯಾನು ಎಂಬೋ ಜ್ಞಾನ ಎಂಥಾದೋ ದಕ್ಷಪ್ರಜೇಶ್ವರನ ಯಜ್ಞದಲ್ಲಿ ರುದ್ರದೇವರ ನಿಮಿತ್ಯ ಮಹಾದ್ರೋಹದಿಂದ ಯಜ್ಞವಾಟ ಹತವಾದ ಮ್ಯಾಲೆ ಸಾಕ್ಷಾತ್ ಬ್ರಹ್ಮದೇವರು ಬಂದು ರುದ್ರದೇವರನ ಶ್ಯಾಂತಮಾಡಿ ಯಜ್ಞ ರಕ್ಷಿಸಿ ಪುನಹ ಪರಮಾತ್ಮನನ್ನು ದಕ್ಷಪ್ರಜೇಶ್ವರಗೆ ದರ್ಶನ

ಮಾಡಿಸುವ ಜ್ಞಾನ ಎಂಥಾದ್ದೋ ಪರಮಾತ್ಮನ ನಿರ್ಧಾರ ಮಾಡೋ ನಿಮಿತ್ಯ ನಿನ್ನಕಿಂತ ಸೋತ್ತಮರಾದ ಬ್ರಹ್ಮದೇವರಿಗೆ ವಂದಿಸದೇ ತುಚ್ಛೀ ಕರಿಸಿದ ಜ್ಞಾನ ಎಂಥಾದ್ದೋ ತತ್ವಾಭಿಮಾನಿಗಳಿಗೆ ಸಮರಾಗಿ ಇಹೋ ಜ್ಞಾನ ಎಂಥಾದ್ದೋ ? ಇಂಥಾ ಸುಜ್ಞಾನವುಳ್ಳ ಭೃಗುಮುನೇಶ್ವರರ ಮಹತ್ಮೆ ಆರಿಂದ ವರ್ಣಿಸಲಿಕ್ಕೆ ಶಕ್ಯ. ಇವರಿಗೆ ವೈಕುಂಠದಲ್ಲಿ ಸಮಗ್ರ ಭೂ ಭಾಗದಲ್ಲಿ ಹೋಗಲಿಕ್ಕ ತಡೆಇಲ್ಲ. ಇಂಥಾ ಭೃಗುಮುನೇಶ್ವರರು ಎನ್ನಮ್ಯಾಲೆ ಪೂರ್ಣಾನುಗ್ರಹಮಾಡಿ ಸುಜ್ಞಾನಾಬ್ಧಿಯೊಳಗೆ ಮುಳು ಗಿಸಲಿ.

## ಅಗ್ನಿದೇವರ ಪ್ರಕರಣ

ಇನ್ನುಮುಂದೆ ಅಗ್ನಿ ದೇವರ ಪ್ರಕರಣ. ರಜೋರಜಃ ಸತ್ವಗುಣ ದಿಂದ ವಿಕಾರವಾದ ಶರೀರವುಳ್ಳಂಥಾ ಅಗ್ನಿದೇವರು ತೈಜಸ ರುದ್ರದೇವ ರಿಂದ ಇಂದ್ರ ಬೃಹಸ್ಪತೀ ಸೂರ್ಯನದ್ವಾರ ಉತ್ಪನ್ನರಾದವರು. ತನ್ನ ಗುಣಗಳಿಂದ ಉಪದಿಷ್ಟಾನಂತರ ಶರೀರ ಸ್ವಾಧೀನಕ್ಕ ಪರಮಾತ್ಮನ ಸೇವೆಗೋಸ್ಕರ ಬಾರದೇ ಹೋದರೆ ಮತ್ತೆ ಗುರುವಾದ ಸೂರ್ಯನನ್ನು ಉಪಾಯ ಕೇಳಲು ಪರಮಾತ್ಮನ ಆರಾಧನೆ ಸುಲಭವಾದರೆ ಮೋಕ್ಷ ಬೇಕೆಂಬ ಅಪೇಕ್ಷ ಏನುಕಾರಣ ಅತಿ ದುರ್ಲಭವಾದ ಪ್ರಯುಕ್ತ, ಅತಿ ದುರ್ಲಭ ನೇಮವುಳ್ಳವನಾಗು. ಶರೀರದಾಸೆ ಬಿಡು. ವಾಂಛನೇಮ ಉಳ್ಳವನಾಗು. ಉದರದಾಸೆ ಬಿಡು. ಪರಮಾತ್ಮನ ಸ್ತೋತ್ರದಲ್ಲಿ ರತ ನಾಗು. ಅನ್ಯವಾರ್ತೆ ಸರ್ವಥಾ ಕೇಳಬ್ಯಾಡ. ಹೀಗೆ ನೇಮವುಳ್ಳವನಾ ದರೆ ಪರಮಾತ್ಮನಾರಾಧನಿಗೆ ಮನಸ್ಸು ಎರಗುತದೆ. ಅದರಿಂದ ಪರ ಮಾತ್ಮ ತುಷ್ಟನಾಗಿ ನಿನಗೆ ಪ್ರತ್ಯಕ್ಷನಾಗಿ ಸ್ವಯೋಗ್ಯ ವೇದ ದರ್ಶನ ಮಾಡಿಸಿ ನಿನ್ನಿಂದ ತದುಕ್ತ ಗುಣಗಳನ್ನು ಉಪಸಂಹಾರ ಮಾಡಿಸಿ ಕೊಂಡು ನಿನಗೆ ತಕ್ಕ ಅನುಗ್ರಹ ಮಾಡ್ಯಾನೆಂದು ಹೇಳಲಾಗಿ ಉಕ್ತ ಪ್ರಕಾರ ಆಚರಿಸಲು ಹಾಗೆ ಪರಮಾತ್ಮ ಪ್ರತ್ಯಕ್ಷನಾಗಿ ಸ್ವಯೋಗ್ಯ ದರ್ಶನ ಮಾಡಿಸಿಕೊಂಡು ನಿನ್ನ ತಕ್ಕ ಆ ವೇದಗಳಿಂದ ಸ್ತುತ್ಯನಾಗಿ ಪರಮಾತ್ಮ ಪೂರ್ಣಾನುಗ್ರಹದಿಂದ ಆಡುವ ಮಾತು "ಹೇ ಅಗ್ನಿ ನಿನ್ನ ತಪಸ್ಸಿಗೆ ನಾನು ತುಷ್ಟನಾದೆ. ಎಂಥಾ ತಪಸ್ಸು. ವರ ಹಾಗೆ ಕೊಡಥೀನಿ ಕೇಳು

ನೀನು ದಾವ ನಿಮಿತ್ಯ ಶರೀರ ಪ್ರಕಾಶ ಮಾಡಿಕೊಳ್ಳದೇ ಹೋದಿಯೊ ಅದೇ ನಿಮಿತ್ಯದಿಂದ ನೀನು ಅತಿ ಪ್ರಕಾಶಮಾನವಾದಂಥ ತೇಜಸ್ಸಿಗೆ ಅಭಿಮಾನಿಯಾಗು. ಅತಿ ಗುಪ್ತನಾಗಿದ್ದಿಯಾದಕಾರಣ ಕಾಷ್ಟದಲ್ಲಿ ಗುಹ್ಯನಾಗಿರು. ಉದರ ಪೋಷಣೆ ಬಿಟ್ಟಿಯಾದಕಾರಣ ನೀನು ಸರ್ವ ಭಕ್ಷಕನಾಗು. ದೋಷ ದೂರನಾಗು. ನಿಷೇಧ ಪದಾರ್ಥ ಭಕ್ಷಿಸಿದ ಪಾಪ ನಿನಗೆ ಬರಬ್ಯಾಡ. ಹ್ಯಾಗಂದರೆ ಮೈಲಿಗಿಯಾದರೆ ಭಾಗೀರಥಿ ಸಮ್ಮಂಧ ವಾದರೆ ಹ್ಯಾಗ ಮಡಿಯಾಗತದೋ ಹಾಗೆ ಕೇವಲ ನಿಷಿದ್ಧ ಪದಾರ್ಥ ನಿನ್ನ ಸಮ್ಮಂಧವಾದ ಕ್ಷಣದಲ್ಲಿ ಶುದ್ಧವಾಗಲಿ. ಇದರ ಸಮಗ್ರ ಅನುಭವ ಯೋಗ್ಯವಾಗಲು ಇನ್ನು ನಿನಗೆ ದೋಷ ವೆಲ್ಲಿಂದ ಬಂಧೀತೆಂದು ಹೇಳಿ, ಆ ಮ್ಯಾಲೆ ನೀನು ದಾವ ನಿಮಿತ್ತ ವಾಂಜನೇಮ ಮಾಡಿ ಅನ್ಯ ವಾರ್ತಿ ನುಡಿಯದಲೆ ಇದ್ದಕಾರಣ ನೀನು ವಾಗಾಭಿಮಾನಿಯಾಗು. ಇಷ್ಟು ಸಾಮ್ರಾಜ್ಯ ನಿನಗೆ ಕೊಟ್ಟೇನಿ. ಇನ್ನು ಸರ್ವರ ಹೃದಯದಲ್ಲಿ ವೈಶ್ವಾನರ ನಾಗಿರು. ನಾನು ಮಾಡೋ ಅನ್ನ ಪಚನಾದಿ ಕ್ರಿಯಕ್ಕೆ ಕಾರಣನಾಗಿರು ಇಷ್ಟು ಸಂಪತ್ತಿನಿಂದ ಭಗವದ್ಭಕ್ತರಿಗೆ ಸಾನುಕೂಲನಾಗಿ ನಿನ್ನೋಪಾದೆ ಯಲ್ಲಿ ವಾಂಙ್ಮಯಾದಿ ವ್ಯಾಪಾರ ಮಾಡಿಸಿ ನಿನ್ನ ಪ್ರಸಾದಕ್ಕ ಕಾರಣರನ್ನು ಮಾಡು. ಇದೇ ನನಗೆ ಪೂಜೆ. ಅಭಕ್ತರಿಗೆ ದುಷ್ಟ ಮಾತುಗಳಾಡಿಸಿ, ನಿನ್ನ ವಾರ್ತಿ ನುಡಿಸದೇ ಕೆಡಿಸು. ಇದೇ ನನ್ನ ಪೂಜೆ ಎಂದು ಪರ ಮಾತ್ಮ ಹೇಳಿದ ಕಾರಣ" ವಾಂಜನೇಮ, ಉಪವಾಸಾದಿ ವ್ರತ ಪರಮಾ ತ್ಮನ ಸ್ತೋತ್ರದಿಂದ ಇದ್ಧೆನೆಂಬೋ ಅಧಿಕಾರ. ಹೀಗೆ ಕೊಟ್ಟದ್ದು ತಿಳದು ತಾನು ಭಗವದ್ಭಕ್ತನಾಗಿ ಈ ನಿಮಿತ್ತ ಅಗ್ನಿದೇವರನ್ನು ಕೊಂಡಾಡಿದರೆ ವಾಕ್ಯಾರ್ಥ ಈ ಸಾಧನ ಪ್ರಾಪ್ತಿಯಾಗೋದು, ಇಲ್ಲವೇ ಆಗದು. ತತ್ಕಾರಣ ಅಗ್ನಿ ದೇವರ ಮೊರೆ ಹೋಗಬೇಕು. ಇದು ಅಗ್ನಿದೇವರ ಪ್ರಕರಣ ಇನ್ನು

## ಪ್ರಸೂತಿ ದೇವಿ ಪ್ರಕರಣ

ಈಕಿ ಅಗ್ನಿದೇವರಿಗೆ ಸಮಳು. ದಕ್ಷಪ್ರಜೇಶ್ವರನ ಪತ್ನಿ. ರಜೋ ರಜಃ ಸತ್ವಗುಣದ ವಿಕಾರದಿಂದ ಶರೀರವುಳ್ಳವಳಾಗಿ ತನ್ನ ಪುಣ್ಯಪ್ರಭಾವ ದಿಂದ ಪತಿಗೆ ಅನುಕೂಲಳಾದಳು.

## ವಿಶ್ವಾಮಿತ್ರ ಮರೀಚ್ಯಾದಿ (೭) ಜನ, ವೈವಸ್ವತಮನು

ಇನ್ನು ರಜೋರಜ ಸತ್ವಗುಣದಿಂದ ಶರೀರ ಉಳ್ಳವರು. ವಿಶ್ವಾಮಿತ್ರ ಮರೀಚ್ಯಾದಿಗಳು ವೈವಸ್ವತ ಮನು ಸಮರು. ಮಹಾ ಭಗವನ್ನಿಷ್ಟರಾಗಿ ಋಷಿತ್ವ ಸಂಪಾದಿಸಿ ಜಗತ್ತಿನ ಸಂತತಿಗೆ ಜ್ಞಾನೋಪದೇಶಕ್ಕೆ ಕಾರಣರಾಗಿದ್ದಾರೆ. ಇವರ ಮಹತ್ಮೆ ಹೇಳಲಿಕ್ಕೆ ಶಕ್ಯವಿಲ್ಲ.

## ಮಿತ್ರನಾಮಕ ಸೂರ್ಯನ ಪ್ರಕರಣ

ಇನ್ನು ರಜೋರಜಃ ಸತ್ವಗುಣದ ವಿಕಾರದಿಂದ ಶರೀರವುಳ್ಳವರು. ಮಿತ್ರನಾಮಕ ಸೂರ್ಯ ಪ್ರವಾಹ ವಾಯುವಿನ ಪತ್ನಿ ಪ್ರಾವಹಿ ಬ್ರಹಸ್ಪತ್ಯಾಚಾರ್ಯರ ಪತ್ನಿ ತಾರಾ, ನಿರಋತಿ ಈ ನಾಲ್ವರು ಸಮರು. ಪ್ರಾವಹಿ ತಾರಾದೇವಿ ಈ ಉಭಯರು ತಮ್ಮ ತಮ್ಮ ಪುರುಷರ ಪ್ರತಾಪದಿಂದ ಪತಿವ್ರತರಾದರು.

**ಮಿತ್ರನಾಮಕ ಸೂರ್ಯನು** ಉಪದಿಷ್ಟನಾಗಿ ಚಿತ್ತ ಪ್ರಶಸ್ತ ಪರಮಾತ್ಮನಾರಾಧನಿಗೆ ಬಾರದೇ ಹೋದರೆ ಮತ್ತೆ ಸೂರ್ಯನು ಉಪಾಯ ಹೇಳಿದ ಪ್ರಕಾರ ಅಧೋಶ್ವಾಸ ನಿರೋಧಮಾಡಿ ಆಸನ ಜಯವುಳ್ಳವನಾಗಿ ಅಂತರಂಗವಲ್ಲಿ ಪರಮಾತ್ಮನ ವೊಲಿಸೆಂದು ಹೇಳಲು ಹಾಗೆ ಆಚರಿಸಲು ಪರಮಾತ್ಮ ಪ್ರತ್ಯಕ್ಷನಾಗಿ ನೀನು ಆಸನ ಜಯಮಾಡಿ ಅಧೋಶ್ವಾಸ ನಿರೋಧ ಮಾಡಿದ ಕಾರಣ ನೀನು ಪಾಯು ಅಭಿಮಾನಿಯಾಗಿ ಸರ್ವರಲ್ಲಿ ವ್ಯಾಪಾರ ಮಾಡಿಸು. ಹೃದಯದಲ್ಲಿ ನೀನು ನನ್ನ ಕಂಡ ಕಾರಣ ನೀನು ನಿನ್ನ ಗುಣಗಳ ಸಹಿತ ಸರ್ವರ ಹೃದಯವಲ್ಲಿ ವಾಸಮಾಡಿ ನನ್ನ ಆರಾಧಿಸು. ನಾನು ಪ್ರಕಾಶನಾಗೋತನಕ ಬಹು ತಪಸ್ಸು ಮಾಡಿದ ಕಾರಣ ಪ್ರತಿವತ್ಸರಕ್ಕ ಒಂದು ಮಾಸ, ಜ್ಯೋತಿಶ್ಚಕ್ರಪದ ನಿನಗೆ ಬರಲೆಂದು ವರ ಕೊಟ್ಟು, ಮುಂದೆ ನನ್ನ ಭಕ್ತರಿಗೆ ನಿನ್ನ ಪ್ರಾರ್ಥಿಸಿದವರಿಗೆ ಆಸನಜಯ ಶ್ವಾಸ ನಿರೋಧ ಸಾಮರ್ಥ್ಯ ಕೊಟ್ಟು ಅನ್ಯರಿಗೆ ಆಸನ ಜಯ ಶ್ವಾಸನಿರೋಧ ಸಾಮರ್ಥಿ ಕೊಡದಿರು. ಇದೇ ನನ್ನ ಪೂಜೆ. ಇದು ಪರಮಾತ್ಮ ಹೇಳಿದಕಾರಣ ಆಸನ ಜಯಕ್ಕ ಮಿತ್ರನ ವೊರೆ ಹೊಕ್ಕರೆ ಪ್ರಾಪ್ತಿ.

## ನಿರಋುತಿ ಮಿತ್ರಗೆ ಸಮ

ರಜೋರಜಃ ಸತ್ವಗುಣ ವಿಕಾರದಿಂದ ಶರೀರವುಳ್ಳವನು. ಪುನಃ ಪುನಃ ಉಪದಿಷ್ಟನಾಗಿ ಆ ವೇದಗಳಿಂದ ಸ್ತುತ್ಯನಾಗಿ ನೀನು ಪಾಪದೂರ ಎಂದು ಉಪಾಸನಾ ಮಾಡಲು ಪರಮಾತ್ಮ ಪ್ರತ್ಯಕ್ಷನಾಗಿ, ಸ್ವಯೋಗ್ಯ ದೃಷ್ಟನಾಗಿ ಆ ವೇದಗಳಿಂದ ಸ್ತುತ್ಯನಾಗಿ ನೀನು ಪಾಪದೂರಾ ಎಂದು ನನ್ನ ಉಪಾಸನ ಮಾಡಿದ ಕಾರಣ, ನೀನು ಪಾಪಾಭಿಮಾನಿಯಾಗಿ ಸರ್ವರ ಹೃದಯದಲ್ಲಿ ವಾಸವಾಗಿದ್ದು ದುಷ್ಟರಿಂದ ಪಾಪಮಾಡಿಸು. ಪ್ರಾಜ್ಞರ ಹಾದಿಗೆ ಹೋಗಬೇಡ ಇದೇ ನನ್ನ ಪೂಜೆ ಎಂದು ಪರಮಾತ್ಮ ಹೇಳಿದ ಕಾರಣ; ದಾರು ಭಗವದ್ಭಕ್ತರಾಗಿ ನಿರಋುತಿ ಮೊರೆಹೊಕ್ಕರೆ ಪುಣ್ಯ ಪ್ರಾಪ್ತಿ ಇಲ್ಲವೆ ಪಾಪಬುದ್ಧಿ ಬಿಡದು. ದಕ್ಷಿಣ ಪಶ್ಚಮಮಧ್ಯ ಕೋ-ಣಾಧಿಪತಿ. ಈತಗೆ ಗುರುಪತ್ನಿ ಮಿತ್ರಾದಿಗಳು ನಾಲ್ವರು ಸಮರು.

ಇನ್ನು ವಿಷ್ವಕ್ಸೇನ ಗಣೇಶ ಕುಬೇರ ಉಕ್ತಶೇಷರು ಸೋಮ ಪಾನಕ್ಕೆ ಲಕ್ಷ ಜನರು ಇವರು ರಜೋರಜಃ ಸತ್ವಗುಣದಿಂದ ಶರೀರ ವುಳ್ಳವರು. ಇವರು ಅನಿರುದ್ಧ ಗುರುಗಳಿಂದ ದಶಗುಣಗಳಿಂದ ನೀಚರು ಮತ್ತು ಶತಗುಣ ಸಹಸ್ರಗುಣ ನೀಚರ ವಿಷಯ ಹೇಳಲ್ಪಡತದೆ.

## ಕುಬೇರನ ಪ್ರಕರಣ

ಕುಬೇರನು ಅನಿರುದ್ಧ ಸೋಮ ವರುಣನದ್ವಾರ ಶರೀರವುಳ್ಳವನಾಗಿ ಗುರೋಪದೇಶದಿಂದ ವೈರಾಗ್ಯ ಪುರಃಸ್ಸರ ಪರಮಾತ್ಮನೇ ಶ್ರೀಪತಿ ಎಂದು ಉಪಾಸನೆ ಮಾಡಲು ಪರಮಾತ್ಮ ಪ್ರತ್ಯಕ್ಷನಾಗಿ ಉಪಾಸನಾನುಸಾರ, ಧನಾಭಿಮಾನಿಯಾಗೆಂದು ವರ ಕೊಟ್ಟ. ಭಗವದ್ಭಕ್ತನಾಗಿ ನಿನ್ನ ಅನುಸರಿ ಸಿದರೆ, ಪ್ರಾರ್ಥಿಸಿದವರಿಗೆ ಧನ ಸ್ನೇಹ ತಪ್ಪಿಸಿ. ಮಂದ ಮತಿಗಳಿಗೆ ಅಲ್ಲಿ ರತಿ ಹುಟ್ಟಿಸಿದರೆ ಇದೇ ನನ್ನ ಪೂಜೆ ಎಂದು ಪರಮಾತ್ಮ ಹೇಳಿದ ಕಾರಣ ಕುಬೇರನ ಪ್ರಾರ್ಥನಾ ಮಾಡಬೇಕು.

## ವಿಷ್ವಕ್ ಸೇನನ ಪ್ರಕರಣ

ವಿಷಕ್‌ಸೇನ ವಾಯುದೇವರ ದ್ವಾರ ಉತ್ಪನ್ನನಾಗಿ ಪರಮಾತ್ಮನ ಸೇವೆಮಾಡಲು ಮನಸ್ಸು ಸ್ವಾಧೀನಕ್ಕ ಬಾರದೇ, ಮತ್ತೆ ಗುರುಪದೇಶದಿಂದ ಸ್ವಾಮಿಯ ಉಪಾಸನೆ ಮಾಡಲು ಪರಮಾತ್ಮ ಪ್ರತ್ಯಕ್ಷನಾಗಿ, ವೇದ ದ್ರಷ್ಟನ ಮಾಡಿ ಸ್ತುತ್ಯನಾಗಿ ಸ್ವಾಮಿಯ ಉಪಾಸನ ಮಾಡಿದ ಕಾರಣ ಸೇನಾಧಿಪತಿಯಾಗಿರು. ನನ್ನ ಭಕ್ತರಿಗೆ ಬಂದ ಉಪದ್ರವ ಪರಿಹರಿಸು. ದುಷ್ಟರ ಗಂಟಲ ಗಾಣನಾಗಿರು ಎಂದು ವರ ಕೊಟ್ಟ. ಸಾಧನ ಪ್ರತಿ ಕೂಲ ಪರಿಹಾರಕ್ಕ ವಿಷ್ವಕ್‌ಸೇನನ ಮೊರೆ ಹೋಗಬೇಕು.

## ಗಣೇಶನ ಪ್ರಕರಣ

ಗುರುದ್ವಾರ ಉತ್ಪನ್ನನಾಗಿ ರಜೋರಜಃ ಸತ್ವಗುಣದಿಂದ ವಿಕಾರ ಶರೀರ ಉಳ್ಳಂಥಾತನು. ಗುರೂಪದೇಶಪ್ರಕಾರ ಚಿತ್ತ ಸ್ವಸ್ಥ ಬಾರದ ಪಕ್ಷದಲ್ಲಿ ಮತ್ತೂ ಗುರುಗಳ ಕೇಳಿಕೊಂಡು, ತದನುಸಾರ ಆಚರಿಸಿದ ಪ್ರಕಾರ ಹೃದಯಾಕಾಶದಲ್ಲಿ ಪರಮಾತ್ಮನ ರೂಪ ನೋಡಿ, ಸರ್ವತ್ರ ವ್ಯಾಪ್ತ ನಿಸ್ಸಂಗನೆಂಬ ಬಗೆ ಬಗೆ ವಿವೇಕ ಮತಿಯಿಂದ ಸ್ತೋತ್ರ ಮಾಡ ಮಾಡಲಾಗಿ, ಪರಮಾತ್ಮ ಪ್ರತ್ಯಕ್ಷನಾಗಿ ಆಡೋ ಮಾತು–" ಸ್ವಯೋಗ್ಯ ವೇದದರ್ಶಿಯಾಗಿ ತದ್ಗುಣಗಳಿಂದ ನನ್ನ ಕೊಂಡಾಡು ಎಂದು ಪರಮಾತ್ಮ ಹೃದಯದಿಂದ ನುಡಿದದ್ದು. ನೀನು ಹೃದಯಾಕಾಶದಲ್ಲಿ ನನ್ನ ಕಂಡ ಕಾರಣ ಆಕಾಶಾಭಿಮಾನಿಯಾಗಿ, ನಿಸ್ಸಂಗನಾಗಿ, ಸರ್ವರ ಹೃದಯಾ ಕಾಶಕ್ಕ ಆದಿಯಾದ ನಾಭಿ ಸ್ಥಳದಲ್ಲಿ ವಾಸಮಾಡಿ, ನನ್ನ ಅರ್ಚಿಸಿ. ಬಹು ವಿವೇಕನಾಗು ನಿನ್ನ ಮತಿಯಿಂದ ಸ್ತೋತ್ರ ಮಾಡಿದ ಕಾರಣ ನೀನು ನಿನ್ನಕಿಂತ ಉತ್ತುಮರಿಗೆ, ನಿನ್ನ ಅರ್ಚಿಸಿದ ಭಗವದ್ಭಕ್ತ ರಾಗಿದ್ದವರಿಗೆ ಸುಮತಿ ವರ ಕೊಡು. ಇದಕ್ಕೆ ನೀನೆ ಅಭಿಮಾನಿ. ನಿನ್ನ ಭಕ್ತರಾಗದಲೇ ನಿನ್ನನುವರ್ತಿಸದಿರೆ ಸುಮತಿ ವರಾ ಕೊಡಲಾಗದು. ಇದೇ ನನ್ನ ಪೂಜೆಯೆಂದು ಪರಮಾತ್ಮ ವರ ಕೊಟ್ಟ ಕಾರಣ, ಸುಜನರು ಈ ವಿಷಯದಲ್ಲಿ ಪರಮಾತ್ಮನ ಭಕ್ತರಾಗಿ, ಗಣೇಶನ ಸ್ತುತಿಸಿದರೆ ಸಿಸ್ಸಂಗ ನಾಗಿ ಪರಮಾತ್ಮನ ಅನುವರ್ತಿಸುವೊ ಮತಿ ಹುಟ್ಟುತ್ತದೆ. ಇದು ಗಣೇಶನ ಪ್ರಕರಣ.

# ಸೋಮಪಾನಾರ್ಹರು

ಇನ್ನು ೮೫ ಮಂದಿ ವಿವರ, ೪೭ ಮಂದಿ ಮರುತರು, ೧೦ ಮಂದಿ ರುದ್ರರು, ೭ ವಸುಗಳು, ೬ ಸೂರ್ಯರು, ೧೦ ಜನ ವಿಶ್ವ ದೇವತೆಗಳು ೧ ಋಭು ೧ ದ್ಯಾವಾ ೧ ಪೃಥ್ವಿ ೨ ಅಶ್ವಿನೀ ದೇವತೆಗಳು ಒಟ್ಟು ೮೫ ಹೀಗೆ ರಜೋರಜಃ ಸತ್ವಗುಣ ವಿಕಾರದಿಂದ ಶರೀರವುಳ್ಳವರು.

**ಮರುತಗಳು** ಉತ್ಪನ್ನರಾದ ತರುವಾಯ ಮತ್ತೆ ಉಪದಿಷ್ಟರಾಗಿ ಶ್ವಾಸನಿರೋಧಮಾಡಿ ಅಂತರಂಗ ಪರಮಾತ್ಮನ ಆರಾಧಿಸುವಾಗ, ಇವರೊಳಗೆ ಪಂಚಪ್ರಾಣರು ಮಾತೃಕಗಳ (ಪಂಚತನ್ಮಾತ್ರ) ಉಪದ್ರವ ಒಂದೊಂದು ಒಬ್ಬೊಬ್ಬರು ಅಧಿಕವಾಗಿ ಗಣನೆ ಮಾಡದೇ ಸಹಿಸಿ, ಪರಮಾತ್ಮನ ಪೊಲಿಸಿದ ಕಾರಣ, ಪರಮಾತ್ಮ ಪ್ರತ್ಯಕ್ಷನಾಗಿ ಸರ್ವರ ಹೃದಯದಲ್ಲಿ ಆವಾಸಕ್ಕ ಸ್ಥಳಕೊಟ್ಟು, ಸಪ್ತ ಕಮಲಗಳಲ್ಲಿ ಏಳು ಏಳು ಜನರಿಗೆ ಒಂದೊಂದು ಕಮಲಕ್ಕ ಆವಾಸಪ್ರಕಾರ ಸ್ಥಳಕೊಟ್ಟು, ಪಂಚಪ್ರಾಣರಿಗೆ ದಾವ ವಿಷಯ ಬಾಧೆ ಸಹಿಸಿದರೊ ಆ ವಿಷಯಾಭಿಮಾನಿತ್ವ ಹೃದಯದಲ್ಲಿ ಮುಖ್ಯ ಪ್ರಾಣನ ವ್ಯಾಪಾರಕ್ಕ ನೀವು ಆಧೀನರಾಗಿರಿ ಎಂದು ವರ ಕೊಟ್ಟನು. ಅದು ದಾವುದು ಎಂದರೆ ೧ ಶಬ್ದಕ್ಕೆ ಪ್ರಾಣ ೨ ಸ್ಪರ್ಶಕ್ಕೆ ಅಪಾನ ೩ ರೂಪಕ್ಕೆ ವ್ಯಾನ ೪ ರಸಕ್ಕೆ ಉದಾನ ೫ ಗಂಧಕ್ಕೆ ಸಮಾನ ಈ ಪ್ರಕಾರ ಉಪಾಸನೆ ಮಾಡಿ, ಪದ ಸಂಪಾದಿಸಿದ್ದಾರೆ. ಸ್ವಲ್ಪು ಶ್ವಾಸನಿರೋಧಿಸಲಿಕ್ಕ ಕಲಿ ಬೇಕಾದರೆ ಶಬ್ದ ಸ್ಪರ್ಶಾದಿ ವೇಧನೆ ಮನಕ್ಕೆ ತಟ್ಟದೇ ಇರಬೇಕಾದರೆ ಪಂಚಪ್ರಾಣರ ಮೊರೆ ಹೋಗತಕ್ಕದ್ದು. ಇವರ ಆವಾಸ ಪ್ರವಾಹ ವಾಯು ಅಭಿಮನ್ಯವಾದ ವಾಯ್ವಾವೇಶದಲ್ಲಿ ತಿಳಿಯತಕ್ಕದ್ದು. ೪೭ ಜನ ಮರುತಗಳ ಪ್ರಕರಣ.

ಇನ್ನು **ಅಶ್ವಿನೀ ದೇವತೆಗಳು** ವಿಶೇಷವಾಗಿ ಘ್ರಾಣೇಂದ್ರಿಯ ನಿರೋಧ ಮಾಡಿದ ಕಾರಣ ಘ್ರಾಣೇಂದ್ರಿಯಾಭಿಮಾನಿತ್ವ ದೇವರು ಕೊಟ್ಟಿದ್ದಾರೆ. ಪೃಥಿವೀ ಗಂಧ ವರ್ಜಿತಳಾಗಿ ಪರಮಾತ್ಮನ ಒಲಿಸಿದ ಕಾರಣ ಗಂಧವುಳ್ಳ ಪೃಥ್ವಿಗೆ ಅಭಿಮಾನಿ. ಇನ್ನು ಮಿಗಿಲಾದ ವಸುಗಳು ರುದ್ರರು ಸೂರ್ಯರು (೬) ಋಭು ಇವರೆಲ್ಲರೂ ಸಮರು.

ಒಂದೊಂದು ಸೇವೆಯಿಂದ ಪರಮಾತ್ಮನ ಮೆಚ್ಚಿಸಿದ ಕಾರಣ, ಒಂದೊಂದು ಪದ ಸಂಪಾದಿಸಿ ಇಹೋರು.

ಇನ್ನು ಇವರಿಗೆ ಸಮಾನರು ನವಕೋಟಿ ರೋಮಾಭಿಮಾನಿಗಳು ಇಲ್ಲಿ ಹುಟ್ಟಿದ್ದು, ತಪಸ್ಸಿನಿಂದ ಪರಮಾತ್ಮನ ಪೂಲಿಸಿ ಜನರ ಶರೀರದಲ್ಲಿ ನವಕೋಟಿ ರೋಮದಲ್ಲಿ ಇರಥಾರೆ.

## ಪಾದಾಭಿಮಾನಿ ಜಯಂತ

ಪಾದದಿಂದ ಪರಮಾತ್ಮನ ಸೇವೆ ಬಹಳ ಮಾಡಿ, ಈ ಪದ ಸಂಪಾದಿಸಿದ್ದಾನೆ. ಇಲ್ಲಿಯವರೆಗೆ ರಜೋರಜಃ ಸತ್ವಗುಣ ವಿಕಾರದಿಂದ ಶರೀರವುಳ್ಳವರೆಂದು ತಿಳಿಯಬೇಕು. ಅಗ್ನಿ ತರುವಾಯದಲ್ಲಿ ಮರೀಚ್ಯಾದಿಗಳು ಸಪ್ತಋಷಿಗಳು, ವಿಶ್ವಾಮಿತ್ರ ವೈವಸ್ವತ ಮನು (೯) ಜನ ಸಮರು. ರಜೋರಜಃ ಸತ್ವಗುಣದಿಂದ ಶರೀರವುಳ್ಳವರಾಗಿ ಮಹಾ ಭಗವನ್ನಿಷ್ಟರಾಗಿ ಋಷಿತ್ವ ಸಂಪಾದಿಸಿ, ಜಗತ್ತಿನ ಸಂತತಿಗೆ ಜ್ಞಾನೋಪದೇಶಕ್ಕೆ ಕಾರಣರಾಗಿದ್ದಾರೆ. ಇವರ ಮಹತ್ಮೆ ಹೇಳಲಿಕ್ಕೆ ಶಕ್ಯವಲ್ಲ. ಇವರ ಮಹತ್ಮೆ ಮೇಲೆ ಬರೆದಂಥಾದು ಮತ್ತು ಇಲ್ಲಿ ಬರದದೆ. ಈ ೮೫ ಜನ ಸೋಮಪಾನಕ್ಕೆ ಅರ್ಹರು. ೧೫ ಜನ ಉಕ್ತರನ್ನು ಕೂಡಿಸಿಕೊಂಡು (೧೦೦) ಜನರು ತಿಳಿಯುತಕ್ಕದ್ದು. ಇಲ್ಲಿಗೆ ರಜೋರಜಃ ಸತ್ವಗುಣದ ವಿಕಾರದಿಂದ ಶರೀರವುಳ್ಳವರು ಮುಗಿದರು. ಇಲ್ಲಿತನಕ ವೈಕಾರಿಕ ರುದ್ರ ದೇವರಿಂದ ಸೃಷ್ಟಿ ಎಂದು ತಿಳಿತಕ್ಕದ್ದು. ಇದು ಬ್ರಹ್ಮಾಂಡ ಹೊರಗಿನ ಸೃಷ್ಟಿ ಇದು ತತ್ವಾಭಿಮಾನಿ ದೇವತೆಗಳ ಪ್ರಕರಣ.

## ಶ್ರೀಗುರು ಮಧ್ವೇಶಾರ್ಪಣಮಸ್ತು

ಉಳಿದ ಅರ್ಧ ಗ್ರಂಥ ಮುಂದೆ ೫ ನೇ ಕುಸುಮದಲ್ಲಿ ಪ್ರಕಟಿಸುತ್ತದೆ.

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೩ | ೧೨ | ಭೂತರಾದಂಥ | ಭೂತರಾದಂಥ |
| ೪ | ೧೫ | ವತಿತ್ವಂ | ವಶಿತ್ವಂ |
| ೫ | ೨೭ | ಅಭಿಪೂನಿಗಳು | ಅಭಿಮಾನಿಗಳು |
| ೬ | ೪ | ಭಯವೇವಚ | ಭಯಮೇವಚ |
| ೬ | ೬ | ನಿಶ್ಯ | ನಿತ್ಯೆ |
| ೬ | ೯ | ವೇವೇರಿಂದ | ದೇವೇರಿಂದ |
| ೬ | ೧೦ | ಅವ್ಯಾಕೃತಾಕಾರ | ಅವ್ಯಾಕೃತಾಕಾಶ |
| ೭ | ೭ | ತಕ್ಕದಲ್ಪಾ | ತಕ್ಕದ್ದಲ್ಲ |
| ೭ | ೧೨ | ಸೂಡಿಸಿ | ಮಾಡಿಸಿ |
| ೧೦ | ೮ | ವಿಪ್ಪುಡಾನಂದ | ವಿಪ್ಲುಡಾನಂದ |
| ೧೧ | ೭ | ಅವವರ್ಣ | ಆವರ್ಣ |
| ೧೩ | ೨೦ | ೧೦೩ | ೧೧೩ |
| ೧೬ | ೧೧ | ಅಪನಿಂದ | ಆವನಿಂದ |
| ೧೬ | ೧೮ | ಪ್ರತಿಬಿಂಟನ್ನ | ಪ್ರತಿಬಿಂಬನ್ನ |
| ೧೭ | ೪ | ಹತ್ತು | ನೂರು |
| ೧೮ | ೧೦ | ದ್ವೇಷಯಾದಂಥ | ದ್ವೇಷಿಯಾದಂಥ |
| ೧೯ | ೧೪ | ರೇಷ | ಶೇಷ |
| ೨೧ | ೨ | ಪಂಥವರು | ವಂಥವರು |
| ೨೧ | ೬ | ಅನಂತಾನಂರ | ಅನಂತಾನಂತ |
| ೨೩ | ೧೯ | ಪರ್ವಯಾ | ಪರ್ವನಾಮಾ |
| ೨೪ | ೩ | ತಿರಸ್ಸಿನಲ್ಲಿ | ಶಿರಸ್ಸಿನಲ್ಲಿ |
| ೨೪ | ೧೧ | ಓಂನಿಯಾಮಕ | ದಿಂಜ್ಞನಿಯಾಮಕ |
| ೨೪ | ೧೧ | ವಿದಿಂಓಂ | ವಿದಿಂಜ್ಞ |
| ೨೪ | ೨೨ | ಕೆಂವು | ಕೆಂಪು |
| ೨೫ | ೨೩ | ಹುಟ್ಟಸಲ್ಪಟ್ಟ | ಹುಟ್ಟಿಸಲ್ಪಟ್ಟ |
| ೩೬ | ೧೩ | ವೃಕ್ಷಸ್ಥಳ | ವಕ್ಷಸ್ಥಳ |

**೨೪ ಪುಟದವರೆಗೆ ಪ್ರೂಫ್ ಎರಡನೇದವರು ನೋಡಿದ ಮೂಲಕ ಬಹು ತಪ್ಪು ಆಗಿವೆ, ದಯವಿಟ್ಟು ತಿದ್ದಿ ಓದುವದಾಗಿ ವಿನಂತಿ.**